ಪೆಡಂಗೆಯ್ಯುಡಿಯೆ ಕಟ್ಟಿ ಗಜತುರಗವಸ್ತುವಾಹನ ಸಹಿತಂ ತಂದು ವಿಷ್ಣುಗೊಪ್ಪಿಸಿ ದೊಡಾತನುಮೊಸೆದು ನೀನ್ ಮೆಚ್ಚಿದುದಂ ಬೇಡಿಕೊಳ್ಳೆನೆ ಪೆಱತೇನುಮನೊಲ್ಲೆನ್ ನಿಮ್ಮ ಪ್ರಸಾದದಿಂದೆನಗೆಲ್ಲಮುಂಟು ಒಂದಂ ಬೇಟ್ಪೆಂ ನಿಮ್ಮಂತಃಪುರಮುಮೆಯೆ ಪೊಲೊಳಗೆನ್ನ ಮೆಚ್ಚಿದ ಪೆಂಡಿರನೆ ಕೊಂಡೆನ್ನಿಚ್ಚೆಯೊಳ್ ಮೆಚ್ಚಿದಂತೆ ಬಾೞ್ವೆನೀ ದಾಯಮಂ ಬೇಡಿರ್ದೆನಿದನೆನಗೆ ದಯೆಗೆಯ್ದು ಸಲಿಸುವುದುದೆಂದೊಡರಸನುಮಂತೆ ಗೆಯ್ವೆಂದು ಗಜಕುಮಾರಂಗೆ ಬೇಡಿದುದಂ ಕೊಟ್ಟಂ

ಗಜಕುಮಾರನುಂ ತನ್ನ ಬೇಡಿ[೧]ದ ವರಮಂ[೧] ಪೆತ್ತು ಪರದರ ಪಾರ್ವ ರೊಕ್ಕಲಿಗರ ಸಾಮಂತರ ಪೊೞಲೊಳಗುಳ್ಳ ಒಳ್ಪೆಂಡಿರೆಲ್ಲರಂ ಕಣ್ಗಂ ಮನಕ್ಕಂ ಮೆಚ್ಚಿದವರೊಳ್ ತನ್ನಿಚ್ಚೆಯಿಂ[೨]ದಂ ಮೊಱೆದು[೨]ಮೊಟ್ಟಯಿಸಿ[೩]ಯುಯ್ದು[೩]ಬಾೞು ತ್ತಿರೆ ಮತ್ತಮಾ ಪೊೞಲೊಳ್ [೪]ಪಂಗುಳ[೪]ನೆಂಬ ಸುವರ್ಣ[೫]ಗಾಱ[೫]ನ ಪೆಂಡತಿ ವಸುಂಧರಿಯೆಂಬೊಳತ್ಯಂತ ರೂಪಲಾವಣ್ಯಸೌಭಾಗ್ಯಕಾಂತಿ ಹಾವಭಾವವಿಲಾಸ ವಿಭ್ರಮಂಗಳನೊಡೆಯೊಳಂ ಕಂಡು ಗಜಕುಮಾರನಾಕೆಗಾಟಿಸಿ ತನ್ನ ಮನೆಯೊಳ ಟ್ಟಾಕೆಗಾಸಕ್ತನಾಗಿ ಬಾೞುತ್ತಿರ್ಪನ್ನೆಗಮಾ ಪರಣಿಗನುಂ ಪೆಂಡತಿಯ ವಿಯೋಗದೊಳ್ ಸಂತಾಪದಿಂದಮಿರುಳುಂ ಪಗಲುಮನವರತಂ ಬೇ[೬][ಯು][೬]ತ್ತಮಸಮರ್ಥನಪ್ಪುದ ಱಿಂದಂ ಮನದೊಳ್ ಗಜಕುಮಾರಂಗೆ ಮುಳಿಯುತ್ತಿರ್ಪಂ

ಇಂತು ಪಲಕಾಲಂ ಸಲೆ ಮತ್ತೊಂದು ದಿವಸಮರಿಷ್ಟನೇಮಿ ಭಟ್ಟಾರರ ಸಮವಸರಣಂ ವಿಹಾರಿಸುತ್ತಂ ದ್ವಾರಾವತಿಗೆ ವಂದೊಡೆ ವಿಷ್ಣುವಿನೊಡನೆ ಗಜ ಕುಮಾರಂ ತ್ರಿಭುವನ ಪರಮೇಶ್ವರನಲ್ಲಿಗೆ ವೋಗಿ ವಂದಿಸಿ ಪೂಜಿಸಿರ್ದು ಭಟಾರರ್ ಧರ್ಮಮಂ ಪೇೞ್ವಲ್ಲಿಯಗವ್ಯಾಗಮನಂ ಗೆಯ್ವೊಡಂ ಪೆಱರ ಸಜ್ಜನಂಗಳೊಳ್ ಬ[೭]ರ್ದೊರ್ಡಮೆಯ್ದುವ[೭] ದುರ್ಗತಿಗಳೊಳಪ್ಪ ದುಃಖಂಗಳಂ ಪೇೞೆ ಕೇಳ್ದು ನಾನ್ಯಥಾಜಿನಭಾಷಿತಮೆಂದು ನಂಬಿ ಭೋಗಂಗಳ್ಗೆ ಪೇಸಿ ವೈರಾಗ್ಯಮಾಗಿ ಎಲ್ಲಮಂ ತೊಱೆದರಿಷ್ಟನೇಮಿ ಭಟ್ಟಾರರ ಪಕ್ಕದೆ ತಪಂಬಟ್ಟುಗ್ರೋಗ್ರ ತಪಶ್ಚ ರಣಂಗೆಯ್ದು ಪನ್ನೆರಡು ವರ್ಷಂ ಪೋದೊಡೆ [೮]ಗ್ರಾಮನಗರಖೇಡಖರ್ವಡ ಮಡಂಬಪಟ್ಟಣ ದ್ರೋಣಾಮುಖಂಗಳಂ[೮] ವಿಹಾರಿಸುತ್ತಂ ಮತ್ತಮಾ ದ್ವಾರಾವತಿಗೆ ವಂದು [೯]ಶೀವತೋ[೯]ದ್ಯಾನ ವನದೊಳ್ ರಾತ್ರಿ ಪ್ರತಿಮೆನಿಂದೊನಂ ಸ್ವಜನ ಪರಿಜನ ಬಂಧುವರ್ಗಮುಂ ಶ್ರಾವಕರ್ಕಳುಂ ಬಂದರ್ಚಿಸಿ ಪೊಡೆವಂಟು ಪೋಪರಂ [೧೦]ಪಂಗುಳ[೧೦]ನೆಂಬ ಸುವರ್ಣಕಾರಕಂ ಕಂಡು ಬೆಸಗೊಂಡು ಭಟಾರರ ಬರವಂ ಕೇಳ್ದಱಿದು ಪಗೆ[೧೧]ವನ[೧೧]ನಿಱಿಯಲ್ಪೆತ್ತೆನೆಂದು ರಾಗಿಸಿ ಪಲವು ನಿಡಿಯವುಂ ಕೋರಮುಮಪ್ಪ ಕಬ್ಬೊನ್ನ ಕೀಲ್ಗಳಂ ಕೊಂಡು ಬಂದು ಕ್ಷಮಾಂಗನಾಲಿಂಗಿತ

೧. ದುದಂ (ಛ). ೨. ದ ಮೆಳೆದು (ಕ,ಖ,ಗ), ದಂ ಮೆಱೆದು (ಘ, ಚ). ೩. (ಘ, ಚ, ಛ) ಗಳಲ್ಲಿಲ್ಲ. ೪. ಪಿಂಗಲ (ಘ, ಚ), ಪಿಂಗಳ (ಛ). ೫. ಕಾರ (ಘ, ಚ), ಕಾರಕ (ಛ). ೬. ವು (ಕ,ಖ,ಗ,ಘ,ಚಜ), ಡು (ಛ). ೭. ರ್ದುಗೆಯ್ವ (ಚ), ರ್ದಡುಮೆಯ್ದುವ (ಕ,ಖ,ಗ). ೮. (ಘ) ದಲ್ಲಿ ಇಲ್ಲ; ಗ್ರಾಮೇಕರಾತ್ರಂ ನಗರೇ ಪಂಚರಾತ್ರಮುಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ ನಾನಾ ದೇಶಂಗಳಂ (ಚ, ಛ). ೯. ಪ್ರಮದೋ (ಘ, ಚ, ಛ). ೧೦. ಪಿಂಗಲ (ಘ, ಚ, ಛ). ೧೧. ಯು (ಕ, ಖ, ಗ).

ನಪ್ಪ ಮಹಾಮುನಿಯಂ [೧]ಮಲಚ್ಚಿರ್[೧] ಪಟ್ಟಿರಿಸಿಯುರಃಸ್ಥಲಮಂ ನಾಭಿವರೆಗಂ [೨]ವಿದಾರಿಸಿ ಪಂದೊವಲ್ ಪೊರೆತಾಪಿನೆಗಂ[೨] ಸಮು[೩]ನ್ತ[೩]ವಯವ ಪ್ರದೇಶಂಗಳೊಳ್ ಕಾಯ್ದ ಕರ್ಬೊನ್ನ ಕೀಲ್ಗಳಂ ನೆಲನಂ ತಾಪಿನಮುರ್ಚಿಪೋಗಿ[೪]ಱ್[೪]ದೊಡೆ ಕ್ಷಮೆಯಂ ಭಾವಿಸಿ ಧರ್ಮಧ್ಯಾನ ಶುಕ್ಲಧ್ಯಾನಂಗಳಂ ಜಾನಿಸಿ ರತ್ನತ್ರಯಮಂ ಸಾಧಿಸಿ ಸಮಾಧಿಮರಣದಿಂ ಮುಡಿಪಿ ದೇವಲೋಕಮೆಂಬ ಪ್ರಾಸಾದಕ್ಕೆ ಕಳಸಮಾಗುತ್ತಿರ್ದ್ದ ಸರ್ವಾರ್ಥಸಿದ್ಧಿಯೆಂಬ ಸ್ವರ್ಗದೊಳ್ ಮೂವತ್ತುಮೂಱು ಸಾಗರೋಪಮಾಯುಷ್ಯ ಸ್ಥಿತಿಯನೊಡೆಯನೇಕ ಹಸ್ತಪ್ರಮಾಣನುಂ [೫]ಪುಂಡರೀಕವರ್ಣಂಗಳನೊಡೆಯೊ[೫]ನಹಮಿಂದ್ರ ದೇವನಾಗಿ ಪುಟ್ಟಿದೊಂ

ಮತ್ತಂ ಪೆಱರುಮಾರಾಧಕರಪ್ಪವರ್ಗಳ್ ರಾಜಕುಮಾರನ ಮನುಷ್ಯೋಪಸರ್ಗದೊಳಾದ ವೇದನೆಯುಂ ಮನದೊಳ್ ಭಾವಿಸುತ್ತಂ ಪಸಿವು ನೀರಟ್ಟೆ ದಾಹ ವಾತಂ ಸೂಲೆ ಮೊದಲಾಗೊಡೆಯ ವೇದನೆಗಳಂ ಸೈರಿಸಿ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂದಂ ಮುಡಿಪಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

ಮುರಳ್ಚಿ (ಘ, ಛ), ಮುರಲ್ಚಿ (ಙ). ೨. ಬೆಂಡೋಲ್ತೊಲಗಿದು (ಕ, ಖ, ಗ). [illegible] ದೊಲ್ಪರೆತಾಪಿನೆಗಂ (ಘ, ಛ). ೩. ಸ್ತ (ಕ, ಖ, ಗ). ೪. ೯ (ಛ). ೫. (ಕ, ಖ, ಗ) ಗಳಲ್ಲಿಲ್ಲ.

## (೪) ಸನತ್ಕುಮಾರ ಚಕ್ರವರ್ತಿಯ ಕಥೆ

ಸನತ್ಕುಮಾರ ಚಕ್ರವರ್ತಿಯ ಕಥೆಯಂ ಪೇೞ್ವೆಂ:

**ಗಾಹೆ॥** [೧]ಕಚ್ಛು[೧]ಜರಖಾಸ ಸೋಸೋ ಭತ್ತಚ್ಛದಿ ಅಚ್ಛಿಕುಚ್ಛಿದುಕ್ಖಾಣಿ ।
ಅ[೨][ಧಿಯಾಸಿ][೨]ದಾಣಿ ಸಮ್ಮಂ ಸಣಂಕುಮಾರೇಣ ವಾಸಸದಂ ॥

[[೩]ಕಚ್ಛು–ಕೆರಕುಂ, ಜರ–ನರೆಯುಂ,[೩] ಖಾಸ–ಕೆಮ್ಮುಂ, ಸೋಸೋ–ಬಾಯ್ ಬತ್ತುವುದುಂ, ಭತ್ತಚ್ಛಡಿ–ಛರ್ದಿಯುಂ, ಅಚ್ಛಿಕುಚ್ಛಿದುಕ್ಖಾಣಿ–ಕಣ್ಣ ಬಸಿಱ ಬೇನೆಗಳುಮೆಂದಿವು ಮೊದಲಾಗೊಡೆಯು, ಅ[ಧಿಯಾಸಿ]ದಾಣಿ–ಸೈರಿಸೆ ಪಟ್ಟವು, ಸಮ್ಮಂ–ಒಳ್ಳಿತ್ತಾಗಿ, ಸಣಂಕುಮಾರೇಣ–ಸನತ್ಕುಮಾರ ಚಕ್ರವರ್ತಿರಿಸಿಯಿಂದಂ, ವಾಸಸದಂ–ನೂಱು ವರುಷಂ]

ಅದೆಂತೆಂದೊಡೆ:

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕುರುಜಾಂಗಣಮೆಂಬುದು ನಾಡಲ್ಲಿ ಹಸ್ತಿನಾಪುರಮೆಂಬುದು [೪]ಪೊಟಲ[೪]ದನಾಳ್ವೊಂ ವಿಶ್ವಸೇನ ಮಹಾರಾಜನೆಂಬರಸ ನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವ್ವರ್ಗ್ಗಂ ಸನತ್ಕುಮಾರನೆಂಬೊಂ [೫]ಪುಟ್ಟಿದೊನಾತಂ ಸರ್ವಲಕ್ಷಣಸಂಪೂರ್ಣಂ ಸಕಳಕಳಾಪಾರಗಂ ಚೆಲ್ವಿನಿಂ ದೇವಾಸುರರ್ಕ್ಕ[೬]ಳಂ[೬] ಗೆಲ್ವ ರೂಪನೊಡೆಯನಾತಂಗೆ ಕೆಳೆಯಂ ಸಿಂ[೭]ಹ[೭]ವಿಕ್ರಮನೆಂಬ ಸಾಮಂತನ ಮಗಂ ಮಹೇಂದ್ರಸಿಂಹನೆಂಬೊನಂತವರ್ಗ್ಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೊಂದು ದಿವಸಂ ಏಕಚಕ್ರಪುರಾ[೮]ಧೀಶಂ[೮] ಭೂರಾಮನಾಮಧೇಯನಪ್ಪ [೯]ಶತ್ರುಂದಮಂ[೯] ವಿಶ್ವಸೇನ ಮಹಾರಾಜಂಗೆ ಪಾಗುಡ[೧೦]ಮನಟ್ಟಿ[೧೦]ಪಟ್ಟ[೧೧]ವಾರಮರಗಮೆಂಬ[೧೧]ದುಷ್ಟಾಶ್ವಮಂ ಕುಮಾರನೇಱೆ ಲಕ್ಷ್ಮೀಗೃಹಮೆಂಬುದ್ಯಾನವನದ ಮಧ್ಯ[೧೨]ಸ್ಥಮಪ್ಪ[ಸ್ಥಲದೊಳ್]ಸಲ್ವನಾ ದುಷ್ಟಾಶ್ವಮಂ ಕೊಸೆಗೊಳೆ ಗಾಳಿಯಿಂದಂ ಬೇಗಮಾಗಿ ವಾರಿತಪೂರಿತಂ ಪರಿದು ಕುಮಾರನಂ ಕೊಂಡು ಮಹಾಟವಿಯಂ ಪೊಕ್ಕೊಡಿತ್ತ ವಿಶ್ವಸೇನ ಮಹಾರಾಜನ ಮಹಾಸಾಮಂತರ್ಕ್ಕಳುಂ ಪರಿವಾರಮುಮೆಲ್ಲಂ ಕುದುರೆವಡಿವಜ್ಜೆಯಂ ನೋಡಿ ಸಾಡೆ*ಗೆಟ್ಟುಪೋಗಿ[೧೨]ಮೂಱನೆಯ ದಿವಸದಂದು ಅಡಿವಜ್ಜೆ ಕೆಟ್ಟೊಡೆ ಪೋದ ದೆಸೆಯನಱಿಯದೆ ಹಾ ಪುತ್ರಾ ಎಂದು ಮಹಾ

---

೧. ಕಂಭಂಕಂ ಕಂಭ (ಘ, ಚ, ಛ). ೨. ಡಿಹಾಸಿ (ಕ, ಖ, ಗ), ವಿಹಾಸ (ಘ, ಚ, ಛ). ೩. ಕಚ್ಛ-ಕೆರಕುಂ ಜ್ವರಮೆಯ್ಗುಳುಂ (ಕ, ಖ, ಗ), ಕಂಭಂಕಂ-ಕೆರಕುಂ ಜ್ವರನರೆಯುಂ (ಛ). ೪. ಪುರಮು (ಕ, ಖ, ಗ). ೫. +ಮಗಂ (ಛ). ೬. ಳ್ಗಂ (ಗ). ೭. ಗ (ಕ, ಖ, ಘ). ೮. ಧಿಪತಿ (ಕ, ಖ) ಧಿಪಂ (ಗ). ೯. ಸತ್ರುವಿಂದಂ (ಕ, ಗ). ಶತ್ರುವಿಂದಂ (ಖ). ೧೦. ಮಟ್ಟಿ (ಕ, ಖ, ಗ). ೧೧. ವಾರತುರಗವೆಂಬ (ಗ), ವಾಂತ (ಘ, ಛ), ವಾಹನ (ಚ). ೧೨. ಈ ಭಾಗ (ಕ,ಖ,ಗ) ಗಳಲ್ಲಿ ಮಾತ್ರವಿದೆ; ಸ್ಥಳದೊಳ್ ಕುಮಾರನಂದು ದುಷ್ಟಾಶ್ವಮುತ್ತಿ ಕೊಂಡು ಪೋಗೆ (ಘ, ಚ), ಸ್ಥಿತಿಕದೊಳು (ಛ). *ಗೆಂಟು ಎಂದಿರಬಹುದೆ?

ದುಃಖಾಕ್ರಾಂತನಾಗಿ ಪ್ರಲಾಪಂಗೆಯ್ವ ನೃಪತಿಯಂ ಮಹೇಂದ್ರಸಿಂಹಂ ಸಂತಯಿಸಿ ಇಂತೆಂಪು ನುಡಿದಂ ಕುಮಾರನಂ ಪಾತಾಳಮಂ ಪೊಕ್ಕನಪ್ಪೊಡಮಱಸಿ ಕೊಂಡು ಬಪೆಂ ನಿಮ್ಮಡಿ ನೀಮುಬ್ಬೆಗಂಬಡದೆ ಮಗುೞಿಮೆಂದರಸನಂ ಮಗುೞ್ಚಿ ಪರಿವಾ[೧]ರಂಬೆರಸು[೧] ಮಹಾಟವಿಯಂ [೨]ಪೊಕ್ಕು[೨] ತೊೞಲ್ದು ನೋ[೩][ಟ್ಟಿ][೩]ನಂ ಪರಿ[೪]ಜನಂಗಳ್ ಕುಮಾರನನಱಸಿ ಕಾಣದೆ ಬೇಸತ್ತು ಮಹೇಂದ್ರಸಿಂಹನಂ ಬಿಸುಟ್ಟು ಪೊೞಲ್ಗೆ ವೋದರ್

ಇತ್ತ ಮಹೇಂದ್ರಸಿಂಹನೊರ್ವನೆ ನಾನಾ ವಿಧ ಗಿರಿಗಹನ ವಿಷಯ ವಿಷಮ ಪ್ರದೇಶಂಗ[೫][ಳುಮಂ][೫] ವ್ಯಾಧನಿವಾಸಂಗ[೫][ಳುಮಂ][೫] ಯಥಾ[೬]ಕ್ರಮದಿಂದಂ[೬] ಕೞಿದು ಪೋಗಿ ಪ್ರಿಯಂಗು[೭]ಷಂಡ[೭]ಮೆಂಬ ವನಮನೆಯ್ದಿ ತದ್ವನ ಮಧ್ಯಸ್ಥ ಗೃಹದೊಳಿರು[೮]ಳಿದ್ದು[೮] ಮಿತ್ರನ ವಿಯೋಗದೊಳಪ್ಪ ದುಃಖದಿಂದಂ ಕಾರುಣ್ಯಮಾಗೆ ಪ್ರಳಾಪಂ ಗೆಯ್ದು[೯]ಟ್ಟು[೯] ದೇವತೆಯ ಮುಂದೆ ನಿದ್ರೆಗೆಯ್ವೊಂ ಮನೋಹರಿಯೆಂಬ ಜಾವ[೧೦]ದಾಗಳ್[೧೦] ಕರಿಣೀ ಶತಂಗಳಿಂ ಪರಿವೇಷ್ಟಿತನಾಗಿ ತಿಳಿನೀರ ಕೊಳದೊಳಗೆ ಕ್ರೀಡಿಸುವ ಸೊಕ್ಕಾನೆಯುಮಂ ಫಲಭರಿತಮಾದ ಮಾವಿನಮರನುಮಂ ಕನಸಿನೊಳ್ ಕಂಡು ಮನೋರಥ ಸಿದ್ಧಿಯಾಯ್ತೆಂದು ಒಸೆದು ಮಗುೞ್ದು ನಿದ್ರಾವಶಗತನಾದೊನಂ ಕಂಡು ಕರುಣಿಸಿ ಭೂತಾಂಬರನೆಂಬ ವ್ಯಂತರ ದೇವನೆತ್ತಿಕೊಂಡು ಪೋಗಿ ವಿಜಯಾರ್ಧ ಪರ್ವತಕ್ಕಾಸನ್ನಮಪ್ಪ ಭೂತರಮಣ ಮೆಂಬ ವನದ ನಡು[೧೧]ವಿನೊಳಿದ್ದ[೧೧] ಕ್ಷುಲ್ಲಕಮಾನಸಮೆಂಬ ಸರೋವರದ ತಡಿಯೊಳಿಕ್ಕಿ ಪೋದನ್

ಆಗಳಾತನುಂ ನೇಸಮ್ಮೂಡುವಾಗಳ್ ತೂಂಕಡುಗೆಟ್ಟು ದೆಸೆಗಳಂ ನೋ[೧೨]ಟ್ಟಿಂ[೧೨]ಸಮುದ್ರದೊಳೋರಂತಪ್ಪ[೧೩]ಕೋಕನದ[೧೩] ಕುಮುದ ಕುವಲಯ ಕಲ್ಹಾ[೧೪]ರೇಂದೀವರಾದಿಗಳಿಂದಂ[೧೪] ಹಂಸ ಚಕ್ರ[೧೫]ವಾ[೧೫]ಕ ಬಳಾಕವಿಪಕ್ಷಿಗಣಂಗ[೧೬]ಳ್[೧೬] ನೀರೊಳಗಾಡುತ್ತುಂ[೧೭] ಮುೞುಗುತ್ತುಂ ನಾನಾ ಪ್ರಕಾರದಿಂ[೧೮]ದಂ ಮೂ[೧೮]ಱುಲಿವ ದನಿಗಳಿಂದಮತಿರಮಣೀಯಮಪ್ಪ ಕೊಳನಂ ಕಂಡಾದಮಾನುಂ ವಿಸ್ಮಯಚಿತ್ತನಾಗಿ ಆ ಭೂತರಮಣವೆಂಬ ವನದೊಳಶೋಕ ಪುನ್ನಾಗ ವಕುಲ ಚಂಪಕಸಹಕಾರಲವಂಗ ಕ್ರಮುಕ ನಾಳಿಕೇರನಾಗವಲ್ಲೀ[೧೯]ಪಿನದ್ಧ[೧೯]ದ್ರುಮಷಂಡ ಮಂಡಿತ[೨೦]ಮನಿಂ[೨೦]ದ್ರವನದೊಳೋರಂತಪ್ಪುದಂ ನೋಡುತ್ತುಂ ತೊೞಲ್ವೊಂ ತನಗನುಕೂಲಮಪ್ಪ ಶಕುನನಿಮಿತ್ತಂಗ [೨೧][ಳುಮಂ][೨೧] ಕಂಡಿಂದಮೋಘಮೆನ್ನ ಸ್ವಾಮಿಯಂ ಕಾಣ್ಬೆನೆಂದು ಸಂತುಷ್ಟಚಿತ್ತನಾಗಿಯಾ ಬನದ ನಡುವೆ ತೊೞಲ್ವೊಂ

---

೧. ರಜನಂಗಳಿಂ ಬೆರಸಿ (ಕ, ಖ, ಗ). ೨. (ಕ, ಖ, ಗ)ಗಳಲ್ಲಿಲ್ಲ. ೩. ರ್ಪ್ಪ (ಕ, ಖ, ಗ). ೪. +ವಾರ (ಕ, ಖ, ಗ). ೫. ಳ್ಮಂ (ಸ). ೬. ಮಂಗಳಿಂ (ಕ, ಖ, ಗ). ೭. ಷ್ಠ (ಘ, ಚ, ಛ). ೮. ಳ್ (ಘ, ಚ). ೯. ತ್ತು (ಕ, ಖ, ಗ, ಛ). ೧೦. ದೊಳ್ (ಘ, ಚ). ೧೧. ವೆ (ಚ, ಛ). ೧೨. ಳ್ಪನ್ನೆಗಂ (ಚ). ೧೩. ಕೊಳದ (ಘ). ೧೪. ರ ಕಲ್ಹಾವರೇಂದ್ರ ದೇವಾದಿಗಳಿಂದಂ (ಕ,ಖ,ಗ). ೧೫. ಬ (ಘ). ೧೬. ಳಿಂದಂ (ಕ, ಖ, ಗ). ೧೭. +ಮೂಡುತ್ತುಂ (ಘ, ಚ, ಛ). ೧೮. ದವ (ಕ, ಖ, ಗ). ೧೯. ವಿನಪ್ರ (ಘ, ಚ, ಛ). ೨೦. ಮಹೇಂ (ಕ, ಖ). ೨೧. ಳ್ಮಂ (ಸ).

ಮೃದುಮಧುರಗಂಭೀರಧ್ವನಿಯೊಳ್ ಕೂಡಿದ ಮೃದಂಗವಂಶ ತಾಳಾದಿಗಳ ಧ್ವನಿಗ[೧][ಳುಮಂ][೧] ಮಂದ್ರತಾರಲಯಾನ್ವಿತಮಾಗೆ[೨] ಕಿವಿಗಂ ಮನಕ್ಕಂ ಸೊಗಯಿಸುವಂತಪ್ಪ [೩]ಪಾಟಮು[೩]ಮಂ ಕೇಳ್ದು ಹರಿಚಂದನ ಕಾಳಾಗರು ಮಲಯಜ ತುರುಷ್ಕಾದಿಗಳ ಕಂಪು ಬಂದು ತೀಡಿದೊಡಿದು ದೇವನಿವಾಸಮಕ್ಕುಮೆಂದು ಬಗೆದು ಭಯಾಶ್ಚರ್ಯದಿಂದಂ ವ್ಯಾಕುಳಿತ ಮನದೊನಾಗಿ ಇನ್ನಿದನವೋಘಂ ನೋೞ್ಪೆನೆಂದಾ ದೆಸೆಗಾಗಿ [೪]ಸಲ್ವನಾಂ[೪] ಕನತ್ಕನಕ ವಿನಿರ್ಮಿತಮುಂ ನಾನಾಮಣಿಗಣ[೫]ಪಿನದ್ಧಮುಂ ಚಳತ್ಕೇತುಪತಾಕಾದ್ಯಮುಂ[೫] ವಿದ್ಯಾಧರ ಯುವತೀ ಜನಕ್ರೀಡನಾರ್ಥಮಪ್ಪ ಪ್ರಾಸಾದಮಂ ಕಂಡು ವಿಸ್ಮಯಚಿತ್ತನಾಗಿ ಯುದಱ ಸಮೀಪಕ್ಕೆ ಸಾರ್ದೊಂದು ಪುರನಂ ಮಱೆಗೊಂಡು ನೋೞ್ಪಂ ತತ್ಪುರಃಸ್ಥಿತಮಪ್ಪ ಮಣಿಮಂಟಪದೊಳ್ ದಿವ್ಯಸ್ತ್ರೀಜನಂಗಳ್ [೬]ವಿಲಾಸದಿಂ[೬] ಚಾಮರಮಿಕ್ಕೆ ದಿವ್ಯಶಯ್ಯಾತಳದ ಮೇಗಿರ್ದು ನಾಟಕಮಂ ನೋೞ್ಪ ಕುಮಾರನಂ ಕಂಡು ಹರ್ಷಚಿತ್ತದಿಂದಂ ಕುಸುಮಿತ ಕದಂಬ ವೃಕ್ಷಂಬೊಲ್ ಕಂಟಕಿತ ರೋಮಾಂಚಿತಗಾತ್ರನಾಗಿ[೭] ಪರಿದು ವರ್ಪೊನಂ[೮] ಕಂಡಿದಿರೆ[೯]ಯ್ದಿ [ಯಾ][೯]ತನುಂ ಕುಮಾರನ ಚರಣಾರವಿಂದಂಗಳ್ಗೆ[೧೦]ಱಗಿ ಬಿರ್ದು ಮೂರ್ಛಾಗತನಾದೊಡಾಗಳ್ ಶೀತಳ ಕ್ರಿಯೆಗಳಿಂದೆೞ್ಚತ್ತುಱದಿಂಗ[೧೧]ಳಿಂ[೧೧]ಕಂಡೆಂ ಸ್ವಾಮಿ [೧೨]ನಿನ್ನಂ ನಂಬಿರ್ದೆ[೧೨]ನಾನೆಂದು ಮಹಾದುಃಖದಿಂದೞ್ವನಂ ಸಂತಯಿಸಿ ವಿಪುಳಶ್ರೀಯೆಂಬ[೧೩]ವಿದ್ಯಾಧರ[೧೩]ವಿಳಾಸಿನಿಯಂ ಕರೆದಿಂತೆಂದು ಪೇೞ್ದನೆನ್ನ ಸಹೋದರನೆಂತುಂ ಶ್ರಮಮಂ ನೀಗಿ ಸುಖದಿಂ ತಣಿದೊನಕ್ಕುಮಂತಾಗೆ ಸ್ನಾನಪಾನಭೋಜನಾದಿ ಕ್ರಿಯೆಗಳಿಂ ಬೇಗಂ ಮಾಡೆಂದು ಪೇೞ್ದೊಡಾಕೆಯುಮಂತೆಗೆಯ್ವೆನೆಂದಾತನಂ ಮಹಾ ವಿಭೂತಿಯಿಂದಂ ವಿದ್ಯಾಧರ ವಿಲಾಸಿನಿ ಮಜ್ಜನಂಬುಗಿಸಿ ದಿವ್ಯಾಹಾರಮನೂಡಿ ವಸ್ತ್ರಾಭರಣ ಗಂಧಮಾಲ್ಯಾದಿ ತಾಂಬೂಲಾದಿಗಳಿಂ ತಣಿಪಿದಾಗಳಾತನುಂ ಮುನ್ನಿನ ದುಃಖಮೆಲ್ಲಮುಂ ಮಱೆದಂ ಮುನ್ನಂ ಕ್ಲೇಶಭಾಗಿಯಪ್ಪ ಪುರುಷಂ ಸ್ವರ್ಗಮನೆಯ್ದಿ [೧೪]ಮಾಱ[ಪ್ಪವೊ]ಲೆ[ಅ]ಯ್ತಾ[೧೪]ಗಳಲ್ಲಿಂ ಬಂದು ಕುಮಾರನೋರಾಸನದೊಳಿರ್ದು ಸರ್ವಾಭರಣ ಭೂಷಿತನಾಗಿ ನೇತ್ರ ಮನೋ[೧೫]ಹರಿಯೆಂಬ[೧೫] ದಿವ್ಯ ಸಭೆಯಂ ನೋಡಿ ವಿಸ್ಮಯಚಿತ್ತನಾಗಿ ಇಂತೆಂದಂ ಸ್ವಾಮಿ: ವ್ರತಶೀಲೋಪವಾಸ ತಪಶ್ಚರಣ ಸಂನ್ಯಸನಾದಿ [೧೬]ಶುಭಾ[೧೬]ನುಷ್ಠಾನ ಕ್ರಿಯೆಗಳಿಂ ಸತ್ಪುರುಷಂ ಮಱುಭವದೊಳ್ ದೇವಾಂಗನೆಯ[೧೭]ರ್ಕಳ[೧೭]ಱೆಯನಕ್ಕುಂ ನೀಮಾಭವದಿಂದಿಂತಪ್ಪ ವಿಭವಮನೆಯ್ದಿದಿರಿದೆನಗೆ ಮಹಾ ವಿಸ್ಮಯಮೆನೆ ಕುಮಾರನಿಂತೆಂದನಿವರ್ಗಳ್ ದೇವಕನ್ನೆಯರಲ್ಲರ್ ವಿದ್ಯಾಧರಿಯರ್ಕಳೆನೆ ಇವರ್ಗಳಂ ನೀಮೆಂತು

---

೧. ಳ್ಕಂ (ಸ). ೨. +ಪಾಡುವಂ (ಕ, ಖ, ಗ). ೩. ಗೀತಮುಂ (ಘ, ಚ, ಛ). ೪. ಸಾರ್ವಂ (ಘ, ಚ, ಛ). ೫. ವಿನದವುಪ್ಪ ಪಲತೆಱದ ಕೌತುಕಮಂ (ಘ, ಚ, ಛ). ೬. ಲಟಹದಿಂ (ಘ, ಚ, ಛ). ೭. + ಮಹೇಂದ್ರಸಿಂಹಂ (ಘ, ಚ, ಛ). ೮. ಸನತ್ಕುಮಾರಂ (ಘ, ಚ, ಛ). ೯. ಳ್ದ ಮಾ (ಕ, ಖ, ಗ), ಯ್ದಿ ಮಾ (ಖ), ಳ್ದು ಬಂದ (ಘ, ಚ, ಛ). ೧೦. +ಮಹೇಂದ್ರಸಿಂಹನೆ (ಘ, ಚ ಛ). ೧೧. ಳಿಂಗೆ (ಘ, ಚ, ಛ). ೧೨. ನಿನ್ನಿಂ ಬಾೞ್ವೆ (ಘ, ಚ, ಛ). ೧೩. ಬಿಂಬಾಧರ (ಘ, ಚ, ಛ). ೧೪. ಮಾಱಪ್ಪೊಲೆಯಾ (ಗ), ಮಾಱಪ್ಪೊಲೆಂದಾ (ಕ, ಖ), (ಘ, ಚ, ಛ). ೧೫. ಹಾರಿಯಪ್ಪ (ಘ, ಚ, ಛ). ೧೬. ಸುಖಾ (ಕ, ಖ, ಗ). ೧೭. ರ್ಗೆ (ಘ, ಚ, ಛ).

ಪೆತ್ತಿರೆಲ್ಲಿ ಮೇಣಾವ ಸ್ವರೂಪದಿಂ ಬಂದಿರಿದನೆನಗೆ ತಿಳಿಯೆ ಪೇೞಿಮೆನೆ ಕುಮಾರ ನಿರುಳೆಲ್ಲಮತಿರಂಜನೆಯೆಂಬ ನಾಟಕಮಂ ನೋಡಿ ನಿದ್ರಾಸುಖಮಂ [೧]ಪೆಱದೊನಾ[೧] ಕಮಳಮತಿಯೆಂಬ ವಿದ್ಯಾಧರ ವಿಳಾಸಿನಿಯುಂ ವಿದಗ್ಧೆಯುಂ ಕರೆದೆನ್ನ ಸಂಬಂಧಿಯಪ್ಪ ಕಥೆಯೆಲ್ಲಮಂ ಮಹೇಂದ್ರಸಿಂಹಂಗೆ ಪೇೞ್ದೆಂದು ನಿದ್ರಾವಶಗತನಾಗಿ ವಾಸಗೃಹಮಂ ಪೊಕ್ಕನಿತ್ತಾ ಕೆಯುಮಾತಂಗಿಂತೆಂದು ಪೇೞಲ್ ತಗುಳ್ದಳ್

ಕುಮಾರನಿಂದಾರೂಢಮಪ್ಪ ದುಷ್ಟಾಶ್ವಂ ಕುಮಾರನಂ ಕೊಂಡು ಮನೋವೇಗದಿಂ ಗಿರಿ ವನ ದರಿ ನದೀಪ್ರದೇಶಂಗಳೊಳ್ ಮೂಱುದಿವಸಮಿರುಳುಂ ಪಗಲುಂ ಪರಿಯುತ್ತಿರ್ದ್ದು ಕರುಳ್ ಪಱಿದು ತೆಗಲೆಯೊಡೆದು ಕಾಲಂಗೆಯ್ದುತ್ತಾಗಳ್ ಕುಮಾರನುಂ ಪಸಿವುಂ ನೀರೞ್ಕೆಯಿಂ[೨]ದವಾದಂ ಬಾಧಿಸೆಪಟ್ಟ[೨] ಬಸಮೞಿದು ಪಿರಿದೊಂದಾಲದ ಮರದ ಕೆೞಗೆ ಶಿಲಾತಳದ ಮೇಗೆ [೩]ಪಟ್ಟಿರ್ದ್ದ[೩]ನಾಗಳಲ್ಲಿಯಾ ವಟವೃಕ್ಷವಾಸಿಯಪ್ಪ ಮನೋಹರನೆಂಬ ಯಕ್ಷಂ ಕಂಡೀ ಪುರುಷಂ ಸಕಲಚಕ್ರವರ್ತಿಯಪ್ಪನೆಂದಱಿದು ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯಂ ವಿಗುರ್ವ್ವಿಸಿ ದೇಹಕ್ಕಾಪ್ಯಾಯನಂ ಮಾಡೆ ಸ್ವರ್ಣ ಭಾಜನದಿಂದಾಮೋದ ಸುಗಂಧಮಪ್ಪ ಕೋಡುವ ನೀರನಾತಂಗೆ ಕುಡಿಯಲೆಱೆದನಾಗಳ್ ಕುಮಾರಂ ನೀನಾರ್ಗ್ಗೆ ನೀರನೆಲ್ಲಿಂ ತಂದಯ್ ಪೇೞೆಂದು ಬೆಸಗೊಂಡೊಡಾತನಿಂತೆಂದನಾನೀ ವಟವೃಕ್ಷನಿವಾಸಿಯೆನ್ ಮನೋಹರನೆಂಬ ಯಕ್ಷನೆನ್ ಕ್ಷುಲ್ಲಕಮಾನಸಮೆಂಬ [೪]ಸರೋವರದಿಂ[೪] ತಂದೆನೀ ನೀರನೆನೆ ಅಂತಪ್ಪೊಡೆ ನೀನೆನ್ನನಾ ಕೊಳ[೫]ಕ್ಕೊಡಗೊಂಡು[೫] ಪೋಗಲ್ಲಿಯಾ ನೀರಂ ಮಿಂದು ಕುಡಿದೊಡಲ್ಲದೆನಗೆ ನೀರೞ್ಕೆ ಕಿಡದೆಂದು ಪೇೞ್ದೊಡೆ ಕುಮಾರನನೆತ್ತಿಕೊಂಡು ಪೋಗಿ ಯಕ್ಷನಾ ಸರೋವರದ ತಡಿಯೊಳ್[೬]ಇೞಿ[೬]ಪಿ ಪೋದನ್

ಆ [೭]ಅವಸರದೊಳ್[೭] ಸಿತಯಕ್ಷನೆಂಬ ವ್ಯಂತರದೇವಂ [೮]ಕುಮಾರನ ಪೂರ್ವವೈರಿ ಭೌಮವಿಹಾರಕ್ಕೆ ಬಂದು ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚ್ಚೆ ಭೈರವರೂಪಧಾರಿಯಾಗಿ ಕಳಕಳಧ್ವನಿಯಿಂದಂ ಗರ್ಜಿಸಿ ಬರ್ಪ್ಪನಂ ಕಂಡಾಗಳ್ ಸಿಂಹನಾದಂಗೆಯ್ದು ಖಟ್ಗ ಸನ್ನಿಭಮಪ್ಪ ಮಹಾಶಿಲೆಯಂ ಕಿೞ್ತೆತ್ತಿಕೊಂಡು ಪ್ರತಿರಾಕ್ಷಸಂಬೋಲ್ ನಿಂದ ಕುಮಾರನಂ ನೋಡಿ ವ್ಯಂತರದೇವಂ[೮] ನಾಗಪಾಶದಿಂದಂ ವೇಷ್ಟಿಸಿದೊಡೆ ಕುಮಾರನದಂ ಹಸ್ತತಳದಿಂ ಪಱಿಯೆ ಪೊಯ್ದುನಾಗಳಾ ದೇವಂ ನಾನಾವಿಧ ಮಾಯಾ ಯುದ್ಧಂಗಳಿಂ ಕಾದೆ ಕುಮಾರನಂ ಯಷ್ಟಿ ಮುಷ್ಟಿ ಪ್ರಹಾರಾದಿಗಳಿಂ ಗೆಲ್ದಿರ್ದ್ದನನೆತ್ತಿಕೊಂಡು ಸಮುದ್ರದ ಬಡವಾಮುಖದೊಳಿಕ್ಕಿ ಕೊಲ್ವೆನಮೋಘಮೆಂದು ನೆಲದಿಂದು [೯]ಬರ್[೯] ಬಂದಾಕಾಶಕ್ಕೆ ನೆಗಪಿದೊನ ಸ್ಕಂಧಮಂ ತಿವಿದೊಂ ಕುಮಾರನ [೧೦]ಅವೃಷ್ಟಿ ವಜ್ರಘಾತಂಬೊಲಪ್ಪ[೧೦] ಮುಷ್ಟಿಯಿಂ ದಿವ್ಯಪುರುಷನ ಹಸ್ತ

---

೧. ಪಿರಿದೊಂವ (ಕ, ಖ), ಪಿರಿದೊಂವ (ಗ), ಪಿಱದೊನನಾ (ಘ, ಛ). ೨. ಸೇದೆವಟ್ಟು ಮಱಿವಂತಾ (ಘ, ಚ, ಛ). ೩. ನಿದ್ರೆಗೆಯ್ದು (ಕ, ಖ, ಗ). ೪. ಕೊಳದಿಂ (ಘ, ಚ, ಛ). ೫. ಕೈ ಕೊಂಡು (ಕ, ಖ, ಗ). ೬. ರಿಸಿ (ಚ, ಛ). ೭. ಸರೋವರದೊಳ್ (ಘ, ಚ, ಛ). ೮. (ಘ, ಚ, ಛ) ಗಳಲ್ಲಿ ಇಲ್ಲ. ೯. ಬ್ಬಿರ್ (ಕ, ಗ). ೧೦. ನುಂ ಅಮುಷ್ಟಿ ವಜ್ರಘಾತಮೆಂಬೊಲಾ (ಕ, ಗ), ನವಜ್ರಘಾತಂಬೊಲಪ್ಪ (ಘ, ಚ, ಛ).

ಪ್ರಹಾರಮೆಂಬ [೧]ಮುದ್ರಾಪೀಡೆಯಿಂ[೧] ತ್ರಸ್ತಾ[೨]ಭಿಭೂ[೨]ತನಾಗಿ ಬೆನ್ನಿತ್ತೋಡಿದನಾಗಳ್ ತನ್ನಿವಾಸಿಗಳಪ್ಪ ಯಕ್ಷಕಿನ್ನರಾದಿಗಳ್ ಮಸ್ತಕದೊಳ್ ನ್ಯಸ್ತಹಸ್ತರ್ಕಳಾಗಿ ಜಯಜಯ [೩]ಶಬ್ದಂಗಳಿಂದಂ[೩] ಪು[೪]ಷ್ಪಾ[೪]ದಿಗಳಿಂ ಕುಮಾರನಂ ಪೂಜಿಸಿದರ್

ಆ ಅವಸರದೊಳಿಂದ್ರಪ್ರಭನೆಂಬ ವಿದ್ಯಾಧರಂ ಬಂದು ಕುಮಾರನ ಚರಣಾರವಿಂದಂಗಳ್ಗೆಱಗಿ ಪೊಡೆವಟ್ಟಿಂತೆಂ[೫]ದನ್ ಸ್ವಾ[೫]ಮಿ ಮೂವ[೬]ತ್ತಾಱು[೬] ವರುಷಂ ನಿನ್ನ ಬರವನಾನೆನ್ನರಸನ ಬೆಸದಿಂ ಪಾರುತ್ತಿರ್ದ್ದೆಂ ನೀನೆನ್ನ ಭಾಗ್ಯದಿನಿಲ್ಲಿಗೆ ಬಂದಯ್ ಏಱು ವಿಮಾನಮನೆನೆ ಅಂತೆಗೆಯ್ವೆನೆನ್ನ ಬಯಕೆಯಂ ತೀರ್ಚ್ಚಿ[೭]ದ ಬೞಿಕ್ಕೇ[೭]ಱುವೆನೆಂದು ಕೊಳನಂ ಪೊಕ್ಕು ಸ್ವೇಚ್ಛೆಯಿಂ [೮]ಕ್ರೀಡಿಸಿ[೮] ಪೊಱಮಟ್ಟನನಾ ಖೇಚರಂ ಕೊಂಡುಪೋಗಿ ತದ್ವನದೊಳತಿ ರಮಣೀಯಮಪ್ಪ ಪ್ರದೇಶದೊಳಾಡುತ್ತಿರ್ದ ವಿದ್ಯಾಧರ ಕನ್ನೆಯರ್ಕಳ ಪಕ್ಕದಿರಿಸಿ ಪೋದನ್ ಇತ್ತ ಖೇಚರ ಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು [೯]ತಪನ[೯] ತಾಪನ ದಹನ ವಿ[೧೦]ಮೋಹನ ಮ[೧೦]ರಣ ಸ್ವರೂಪದ ಕಾಮಶರಂಗಳವರ್ಗ್ಗಳೆರ್ದೆಯನುರ್ಚಿಪೋಗಿ ಪರವಸೆಯರಾಗಿ ಮಱುಗಿದಱುನೀರಮೀಂಗಳ್ವೊಲಾದರಿದೇಂ ಚೋದ್ಯಮೊ ಕುಸುಮಬಾಣನ ಬಿಲ್ಬಲ್ಮೆ

ಶ್ಲೋಕ॥ ಅಹೋ ಧನುಷಿ ಕೌಶಲ್ಯಂ ಮನ್ಮಥಸ್ಯ ಮಹಾತ್ಮನಃ ।
ಅಸ್ಪೃಶನ್ನಪಿ ಗಾತ್ರಾಣಿ ಭಿನತ್ತ್ಯಂತರ್ಗತಂ ಮನಃ ॥

ಇವರ್ಗ್ಗಳ್[೧೧]ತ[೧೧]ನ್ಮುಖ ನಿರೀಕ್ಷಣದೊಳಾಸಕ್ತೆಯರಾಗಿರ್ದ್ದರಾಗಳಾ ಇಂದ್ರಪ್ರಭನೆಂಬ ವಿದ್ಯಾಧರಂ ಪ್ರಿಯ[೧೨]ಸಂಗ[೧೨]ಮಮೆಂಬ ಪೊೞಲನೆಯ್ದಿ ಭಾನುವೇಗನೆಂಬ ವಿದ್ಯಾಧರಂಗೆ ಪೇೞ್ದನಾದೇಶ ಪುರುಷನಂ ತಂದು ಭೂತರಮಣದ ಜ್ಯೋತಿರ್ವಿತಾನಮೆಂಬ ಮಣಿಮಂಟಪದೊಳ್ ಕನ್ನೆಯರ ಪಕ್ಕದಿರಿಸಿ ಬಂದೆನೆನೆ ಆಗಳಾತಂಗೆ ತಣಿವಿನೆಗಂ ತುಷ್ಟಿದಾನಂಗೊಟ್ಟು ವಿಪುಳಶ್ರೀಯೆಂಬ ಖೇಚರಿಯಂ ಕರೆದಿಂತೆಂದಂ ಶೀಘ್ರಂ ಪೋಗಿ ಕೀರ್ತಿಧವಳಂಗೆ ಭೋಜನಾದಿ ವಿಧಿಯಂ ಮಾಡೆಂದು ಪೇೞ್ದೊಡಾಕೆಯುಮಂತೆಗೆಯ್ವೆನೆಂದು ಸಪರಿವಾರಂಬೆರಸು ಬಂದಾತಂಗೆ ಮಜ್ಜನ ಭೋಜನ [೧೩]ಪ್ರಸಾಧ[೧೩]ನಾದಿಗ[೧೪]ಳುಮಂ ಮಾಡಿ[೧೪] ಮತ್ತೆ ಕುಮಾರನಂ ದಿವ್ಯಶಯ್ಯಾತಳದೊಳ್ ಸುಖದಿನಿರಿಸಿ ಅನಂಗ[೧೫]ಸು[೧೫]ದರಿಯೆಂಬ ವಿಧ್ಯಾಧರಿಯ ನಾಡವೇೞ್ದು ನಾಟಕಮ[೧೬]ನಭಿನಯಿ[೧೬]ಸುತ್ತಂ ಕುಮಾರನ ಮುಂದೆ ವಿನಯಾನ್ವಿತೆಯಾಗಿರ್ದ್ದೊಳಂ ಕುಮಾರಂ ನೋಡಿ ಇಂತೆಂದಂ ನೀಮೆನಗೀದೃಗ್ವಿಧಮಪ್ಪುಪಕಾರಮನೇಕೆಗೆಯ್ದಪ್ಪಿರ್ ನೀಮೇನಾಗ್ಗೆಂದು ಬೆಸಗೊಂಡೊಡಾಕೆಯಿಂತೆಂದಳ್

---

೧. ಮಹಾಮುದ್ರೆಯಂ ಪಿಡಿಯೆ (ಘ,ಚ,ಛ). ೨. ಭೀ (ಕ,ಖ,ಗ). ೩. ನಿನಾದಪೂರ್ವಕಂ (ಘ,ಚ,ಛ). ೪. ಜ್ವಾ (ಕ,ಖ,ಗ). ೫. ದನಾ (ಕ-ಛ.) ೬. ತ್ತು (ಘ,ಚ,ಛ). ೭. ದೊಡೇ (ಛ). ೮. ನೀರಂಕುಡಿದು (ಘ,ಚ,ಛ). ೯. ತೊಟ್ಟನೆ (ಘ,ಚ,ಛ), ತರ್ಪಣ (ಖ). ೧೦. ರಹಕಾ (ಘ, ಚ, ಛ). ೧೧. ಮ (ಕ, ಖ, ಗ). ೧೨. ವಂಶ (ಘ, ಛ). ೧೩. (ಘ, ಚ, ಛ)ಗಳಲ್ಲಿಲ್ಲ. ೧೪. ೞಂ ಸಂತೊಸಂಬಡಿಸಿ (ಘ, ಚ, ಛ). ೧೫. ಸೌಂ (ಕ, ಖ, ಗ). ೧೬. ನಾಡಿ (ಘ, ಛ).

ಕೇಳ್ ಪೇೞ್ವೆಂ ಸ್ವಾಮಿ ವಿಜಯಾರ್ಧ ಪರ್ವತದೊಳ್ ಪ್ರಿಯಸಂಗಮಪುರಾಧಿಪತಿಯಪ್ಪ ಭಾನುವೇಗನೆಂಬ ವಿದ್ಯಾಧರಂಗೆ ಶ್ರೀಮಾಲೆ ಮೊದಲಾಗೊಡೆಯ ಮಹಾದೇವಿಯರೆಣ್ಬರವರ್ಗ್ಗೆ ಪುಟ್ಟಿದೊರೀಯೆಣ್ಬರುಂ ಕನ್ನೆಯರ್ಕಳ್ ಲ[೧]ಕ್ಷ್ಮೀ[೧]ಮತಿ ಕನಕಕಾಂತೆ ಮಂದಾರಸೇನೆ ಅಳಕೆ ಅಲಂಭೂಷೆ ಹೇಮವತಿ ಹೇಮಮಾಳಿನಿ ವಿಜಯಾರ್ಧವತಿಯೆಂದೀ ಪೆಸರ್ಗಳನೊಡೆಯರೆಣ್ಬರುಂ ಮ[೨]ಕ್ಕ[೨]ಳನಾರ್ಗೆ ಕುಡುವಮೆಂದೊಂದು ದಿವಸಂ ನೈಮಿತ್ತಿಕನಂ ಭಾನುವೇಗಂ ಬೆಸಗೊಂಡೊಡಾತನಿಂತೆಂದಂ ಕ್ಷುಲ್ಲಕಮಾನಸಮೆಂಬ ಕೊಳದೊಳ್ ಸಿತಯಕ್ಷನೆಂಬ ದೇವನಂ ಸಂಗ್ರಾಮದೊಳಾವೊಂ ಗೆಲ್ಗುಮಾತಂಗೆ ಕೂಸುಗಳಂ ಕುಡಿಮೆಂದು ಪೇೞ್ದನದಱಿಂ ನೀನೆಮ್ಮ ಸ್ವಾಮಿಯೆಂದು ಪೇೞ್ವವಸರದೊಳ್ ಮಹಾವಿಭೂತಿಯಿಂ ಬರ್ಪ್ಪ ಖೇಚರೇಂದ್ರನಂ ತೋಱಿದೊಡೀತಂ ನಿಮ್ಮ ಮಾವನೆಂದಾಗಳ್ ಕುಮಾರನುಮಿದಿರೆೞ್ದು ತದ್ಯೋಗ್ಯಮಪ್ಪ ವಿನಯಮುಮಂ ಗೆ[೩]ಯ್ದಿರ್ದೊನಂ[೩] ವಿದ್ಯಾಧರೇಂದ್ರಂ ಕುಮಾರನಂ ನೋಡಿ ತ್ರಿಭುವನಕ್ಕೆಲ್ಲಂ ತಿಳಕಮಾಗಿರ್ದ್ದಳಿಯನಂ ನಾನೆ ಪೆ[೪]ತ್ತೆ[೪]ನೆಂದಾದಮಾನುಂ ಸಂತುಷ್ಟಚಿತ್ತನಾಗಿ ಕುಮಾರನಂ ಕೊಂಡುಪೋಗಿ ತನ್ನ ಪೊೞಲಂ ಪೊಕ್ಕಾ ದೆವಸದೊಳೆಣ್ಬರ್ ಕನ್ನೆಯರ್ಕ್ಕಳಂ ಕೈನೀರೆಱೆದು ಕುಮಾರಂಗೆ ಕೊಟ್ಟಂ ಕುಮಾರನುಂ ದಿವ್ಯಾಂಗನೆಯರ್ಕ್ಕ[೫]ಳೊಡನೆ[೫] ಸುಖದಿಂ[೬]ದೊಂದಿದ[೬]ನಾಗಳೊಂದು ವನದೇವತೆ ಬಂದು ಸುನಂದೆಯೆಂಬ ಕನ್ನೆಯ ದುಃಖಮುಂ ಕಾಣಲಾಱದೆ ಕರುಣಿಸಿ ಕುಮಾರನನೆತ್ತಿಕೊಂಡು ಪೋಗಿ ಹರಿಕೂಟಮೆಂಬ [೭]ಪರ್ವತದ[೭] ಜ್ಯೋತಿರ್ವನದೊಳ್ ದಿವ್ಯಶಯ್ಯಾತಳಮಂ ವಿಗುರ್ವಿಸಿಯದಱ ಮೇಗೆ ಕುಮಾರನನಿಟ್ಟು ಪೋದೊಡಾತನುಂ ಪ್ರಭಾತಸಮಯದೊಳೆೞ್ಚತ್ತು ದೆಸೆಗಳಂ ನೋೞ್ಪೊನಾ ವನಮುಮಂ ತನ್ನಿರ್ದ್ದ ಲತಾ[೮]ಮಂಟಪ[೮]ಮುಮಂ ನೋಡಿ ಎನಗಿದು ಮಹಾವಿಸ್ಮಯಂ ರಾತ್ರಿಯೊಳ್ ವಿವಾಹಕಲ್ಯಾಣಮೆನಗೆ ಸ್ವಪ್ನದೊಳಾದುದೊ ನಿರುತ[೯]ಮೋ[೯] ಎಂದು ಸಂ[೧೦]ದೇಹ[೧೦]ಚಿತ್ತನಾಗಿ ತನ್ನ ಕೈಯೊಳ್ [೧೧]ಕಟ್ಟಿದ[೧೧] ಕಂಕಣಮುಂ ನೋಡಿಕಂಡು ಕುಮಾರನಿಂತೆಂ[೧೨]ದು ಬಗೆದಂ[೧೨]

**ಶ್ಲೋಕ ॥** ಭವಿತವ್ಯಂ ಭವತ್ಯೇವ ಕರ್ಮಣಾಮೇಷ ನಿಶ್ಚಯಃ ।
ವಿಪತ್ತೌ ಕಿಂ ವಿಷಾದೇನ ಸಂಪತ್ತೌ ವಿಸ್ಮಯೇನ ಕಿಂ ॥

ಎಂದಿಂತು ವಸ್ತುಸ್ವರೂಪಮಂ ಕುಮಾರಂ ಬಗೆಯುತ್ತಿರ್ಪ್ಪನೆಗಂ ದೂರಾಂತರದೊಳ್ [೧೩]ಸಂಭ್ರ[೧೩]ನ್ನಮಾಗುತ್ತಿರ್ದ್ದ [೧೪]ವನದೊಳಿರ್ದ[೧೪] ಕನ್ನೆಯಿಂತೆಂದು ಪುಯ್ಯಲಿಟ್ಟಳ್ ಸಾಕೇತಪುರಾಧಿಪತಿಯಪ್ಪ ಸುರಥನೆಂಬರಸಂಗಂ ಚಂದ್ರ[೧೫]ಯಶಿ[೧೫]ಯೆಂಬ ಮಹಾದೇವಿಗಂ ಪುಟ್ಟಿದೆನ್ ಸನತ್ಕುಮಾರನ ಭಾರ್ಯೆಯೆನ್ ಸುನಂದೆಯೆನೆಂಬೆ

೧. ಕ್ಷ (ಕ, ಖ). ೨. ಕ್ಕ್ರ (ಕ, ಖ, ಗ). ೩. ಯ್ದೆಳ್ದನಂ (ಕ, ಖ, ಗ). ೪. ಳ್ತೆ (ಕ, ಗ). ೫. ಳುಂತಾನುಂ (ಕ, ಖ, ಗ). ೬. ನಿದ್ರೆಗೈದ (ಘ, ಜ, ಛ). ೭. (ಘ, ಚ, ಛ) ಗಳಲ್ಲಿಲ್ಲ. ೮. ವನ (ಕ, ಖ, ಗ). ೯. ಮೇಯಾದುದೊ (ಕ, ಖ, ಗ). ೧೦. ದೆಗ (ಕ), ತುಷ್ಟ (ಚ, ಛ). ೧೧. (ಘ, ಚ, ಛ) ಗಳಲ್ಲಿಲ್ಲ. ೧೨. ದಂ (ಘ, ಜ, ಛ). ೧೩. ಸ್ವಚ್ಛ (ಕ, ಗ). ೧೪. (ಕ, ಗ) ಗಳಲ್ಲಿಲ್ಲ. ೧೫. ಲೇಖೆ (ಘ, ಚ, ಛ).

ನೆನ್ನನನ್ಯಾಯದಿಂ ವಜ್ರವೇಗನೆಂಬ ವಿದ್ಯಾಧರಂ ತಂದಂ ಕಿನ್ನರ ಕಿಂಪುರುಷ ಗರುಡ ಗಂಧರ್ವ ಯಕ್ಷ ರಾಕ್ಷಸಾದಿ ದೇವರ್ಕ್ಕಳಿರಾ ವಿದ್ಯಾಧರರ್ಕ್ಕಳಿರಾ ಶರಣಾಗಿಮಾರ ಪ್ಪೊಡಮೆನ್ನಂ ರಕ್ಷಿಸಿಮೆಂಬ ಕಾರುಣ್ಯಸ್ವರಮಂ ಕೇಳ್ದಾಶ್ಚರ್ಯ ಮನದೊನಾಗಿ ದೆಸೆಯಂ ನೋಡಿ ಸಲ್ವೊಂ ಸ್ಫಟಿಕಮಯಮಪ್ಪ ಶಿಲಾ[೧]ಗೃಹ[೧]ದ ಕೆಲಗಿರ್ದ [೨]ಯಕ್ಷ[೨]ಕನ್ನೆಯಂ ಕಂಡು ನೀನಾರ್ಗೆ ನೆಂಬೆಯಾ ಸನತ್ಕುಮಾರನೆಂಬೊ ನಾರ್ಗೆಂದು ಕುಮಾರಂ ಬೆಸಗೊಂಡೊಡಾಕೆಯಿಂತೆಂದು ಪೇಳ್ದಳ್

ಅಯೋಧ್ಯಾಪುರಮನಾಳ್ವೊಂ ಸುರಥನೆಂಬೊನರಸನಾತನ ಮಹಾದೇವಿ ಚಂದ್ರಯಶಿಯೆಂಬೊಳಾಯಿರ್ವರ್ಗ್ಗಂ ಪುಟ್ಟಿದೆಂ ಸುನಂದೆಯೆಂಬೆಂ ಸನತ್ಕುಮಾ ರಂಗೆ ಗರ್ಭದೊಳಿರ್ದ್ದಂತೆ ನಿವೇದಿ[೩]ಸೆಪಟ್ಟ[೩]ನೆನ್ನಂ ಮದನೋದ್ಯಾನದೊಳುಯ್ಯ ಲಾಡುತ್ತಿರ್ದ್ದೊಳಂ ಭೌಮವಿಹಾರಾರ್ಥಂ ಬಂದು ವಜ್ರವೇಗನೆಂಬ ವಿದ್ಯಾಧರಂ ಕಂಡೆನ್ನನೆತ್ತಿಕೊಂಡು [೪]ಪುಯ್ಯಲಿಡೆಯಿಡೆ[೪] ಬಂದನಿಂದಿಂಗೇೞು ದಿವಸಮುಂಟು ಮತ್ತಾ ಸನತ್ಕುಮಾರನೆಂಬೊಂ ಹಸ್ತಿನಾಪುರಮನಾಳ್ವೊಂ ವಿಶ್ವಸೇನ ಮಹಾರಾಜ ನೆಂಬೊನರಸನಾತನ ಮಹಾದೇವಿ ಸಹದೇವಿಯೆಂಬೊಳಾಯಿರ್ವ್ವರ್ಗ್ಗಂ ಪುಟ್ಟಿದಂ ಸನತ್ಕುಮಾರನೆಂಬೊನೆಂದು ಪೇೞ್ವೊಡೆ ಕುಮಾರನೆಂದನಾತನಂ ಕಂಡೊಡೇ ನಱಿ[೫]ವೋ[೫] ಎಂದು ಬೆಸಗೊಂಡೊಡೆ ಸುನಂದೆಯಿಂತೆಂದಳ್ ಎನ್ನ ತಂದೆ ವಿಶ್ವಸೇನ ಮಹಾರಾಜನೊಳಪ್ಪ ಮಿತ್ರಸಂಬಂಧದಿನೊಂದು ದಿವಸಂ ಹಸ್ತಿನಾಪುರಕ್ಕೆ ವೋಗಿ ಕುಮಾರನಂ ಕಂಡಾತನ ರೂಪಂ ಪಟದೊಳ್ ಬರೆದು ತಂ[೬]ದಾ[೬] ರೂಪನೆಲ್ಲಾ ಪೊೞ್ತುಂ ನೋೞ್ಪೆನುಂ ಬರೆವೆನುಂ ಭಾವಿಸುತ್ತಿರ್ಪೆನಪ್ಪುದಱಿಂದಱಿವೆನಾ ರೂಪುಂ ನಿಮ್ಮನೆ ಪೋಲ್ಕುಮೆನೆ ಯಂತಪ್ಪೊಡಾಂ ಸನತ್ಕುಮಾರನೆನಪ್ಪೆನೆಂದಾಗಳ್ ಹರ್ಷ ರೋಮಾಂಚ ಕಂಚುಕಿತೆ ವಿಕಸಿತವದನೆಯಾಗಿ[೭]ಯಱಿಪ ಬಳ್ಳಿ ಕಾಲ್ತೊಡರ್ದತ್ತೆಂ ಬಂತೆವೊಲಾಯ್ತೆನ್ನ[೭] ಭಾಗ್ಯದಿಂದಂ ಸ್ವಾಮಿ ನೀಮಿಲ್ಲಿಗೆ ಬಂದಿರಾ ವಜ್ರವೇಗಂ ತನ್ನ ತಂಗೆಯನೆನಗೆ ಕಾಪಿಟ್ಟು ತನ್ನ ಪೊಟಿಲ್ಗೆ [೮]ನಿದ್ರೆಗೆಯ್ವೆ[೮] ಪೋದನಾಕೆಯುಂ ಜಳಕ್ರೀಡೆಗೆ ಪೋದಳವಳ್ ಬಾರದನ್ನೆಗಂ ಬೇಗಂ ಪೋಪಮೆನೆ ಕುಮಾರ ನಿಂತೆಂದನಂಜದಿರ್ ನಿನ್ನ ತಂದೊನನಮೋಘಂ ಮೃತ್ಯುಮುಖ[೯]ಕ್ಕುಯ್ವೊಡಲ್ಲದೆ[೯] ಪೋಗೆನೆನೆ ಭಯದಿಂದಂ ನಡುಗಿ ಇಂತೆಂದಳಾತನಾಕಾಶಗಾಮಿ ನೀಮೆಂತು ಕೊಲ್ವಿರೆನೆ ಕುಮಾರಂ ನಕ್ಕಿಂತೆಂದಂ ಆಕಾಶಗಾಮಿಯಪ್ಪ ಕಾಗೆಯನೇಂ ಕೊಲ್ವು ದರಿದೆ ಎಂದು ನುಡಿಯುತ್ತಿರ್ಪ್ಪನ್ನೆಗಂ ವಜ್ರವೇಗನ ಬರವಂ ಕಂಡಾ ಕನ್ನೆ ಯಂಜಿ ಪ್ರಾಸಾದದೊಳಗೆ ಪೋಗಿ ಪೊಕ್ಕಿರ್ದಳ್

ಖೇಚರನುಂ ಕುಮಾರನಂ ಕಂಡು ಪುರುಡಿಂ ಮುಳಿಸು ಪೆರ್ಚ್ಚಿಯೆನ್ನ ಪೆಂಡತಿಯೊಡನೆ ನುಡಿಯುತ್ತಿರ್ದ್ದೊನನಮೋಘಂ ಕೊಲ್ವೆನೆಂದು ಕಿೞ್ತ್ತ ಬಾಳ್ವಿರಸು ಬಂದೆಱಗಿ ಇಱಿದಾತನೇಱಂ ಬಂಚಿಸಿ ಸಿಂಹಲಂಘನದಿಂ ಮೇಗೆ ನೆಗೆದು ವಜ್ರ

೧. ತಳ (ಕ, ಗ). ೨. ಳ್ಚ (ಘ, ಛ). ೩. ಸಲ್ಪಟ್ಟ (ಕ, ಗ). ೪. (ಕ, ಖ, ಗ) ಗಳಲ್ಲಿಲ್ಲ. ೫. ವಾ (ಕ, ಖ, ಗ), ವೆಯೊ (ಚ). ೬. ದೊಡಾ (ಘ, ಚ, ಛ). ೭. ಯಱಿಸಿ ಪೋಪಬಳ್ಳಿ ಕಾಲೊಳ್ ತಗುಳ್ದತ್ತೆಂಬವೊಲೆನ್ನ (ಘ, ಚ, ಛ). ೮. (ಘ, ಚ, ಛ) ಗಳಲಿಲ್ಲ. ೯. ಕ್ಕೊಯ್ದಲ್ಲದೆ (ಕ, ಖ, ಗ).

ಸಮಾನಮಪ್ಪ ಕೈಯಿಂದಂ ಕುಮಾರನಾತನ ತೆಗಲೆಯಂ ತಿವಿದೊಡಾತನಲ್ಲಿ ತನ್ನ ವಿದ್ಯಾಧರ[1]ಕರಣ[1]ಮಂ ತೋರ್ಪ್ಪಂಬೊಲೆ ಮೇಗುಚ್ಚಳಿಸಿ ಬಿಟ್ಟಾಗಡೆ ಮಡಿದಂ ಕುಮಾರನಿಂತೆಂದು ಬಗೆದನೊರ್ವಳೆ ಇರ್ದ ಸ್ತ್ರೀಯ ಪಕ್ಕದೆ ಸತ್ಪುರುಷಂಗಿರಲ್ ತಕ್ಕುದಲ್ಲೆಂದು ಮುನ್ನೆ ತನ್ನಿರ್ದ ಲತಾಮಂಟಪದೊಳ್ ಪೋಗಿರ್ದನನ್ನೆಗಮಿತ್ತ ವಜ್ರವೇಗನ ತಂಗೆ ಸಂಧ್ಯಾವಳಿಯೆಂಬೊ[2]ಳ್ ಮಾನಸ[2] ಸರೋವರದೊಳ್ ಜಲಕ್ರೀಡೆಯಾಡಿ ಬರ್ಪೊಳನ್ನೆಗಂ ತಮ್ಮಣ್ಣಂ ಸತ್ತುದಂ ಕಂಡು ಮೂರ್ಛಾಗತೆಯಾಗಿ ಬಿಟ್ಟು ನೀಡಱಿಂದೆಟ್ಟೆತ್ತು ಕ್ರೋಧಾಗ್ನಿ ಪೆರ್ಚೆ ಎಮ್ಮಣ್ಣನಂ ಕೊಂದ ದುರಾತ್ಮನಂ ಪಾತಾಳಮಂ ಪೊಕ್ಕಿರ್ದನಪ್ಪೊಡಮಱಿಸಿ ಕೊಲ್ವೆನಮೋಘಮೆಂದು ಭಯಂಕರ ರೂಪಂ ಕೈಕೊಂಡು ದೆಸೆಗಳಂ ನೋೞ್ಪೊಳನ್ನೆಗಮಾರುಮಂ ಕಾಣದೆ ಸುನಂದೆಯಂ ಬೆಸಗೊಂಡೊಡಾಕೆಯಿಂತೆಂದಳ್ ದುಷ್ಟನಿಗ್ರಹ ಶಿಷ್ಟಪ್ರತಿಪಾಲನ ಸ್ವರೂಪದಿಂ ಪೃಥ್ವಿಯಂ ರಕ್ಷಿಸುವ ಸ್ವಾಮಿ [3]ಚೋರದಾರ ಪಾದರಿಗ[3]ರ್ಕಳಂ ಕೊಲ್ಲದಿರ್ಕುಮೆ ಎಂದೊಡಾತನಾವೊನೆಲ್ಲಿದೊಂ ತೋಱೆಂದು ಬೆಸಗೊಂಡೊಡೆ ಸುನಂದೆಯುಂ ಪೋಗಿ ಕುಮಾರನಂ ತೋಱಿದೊಡಾಕೆಯುಮಸಿಖೇಟಕಹಸ್ತೆಯಾಗಿ ವಿಭೀಷಣಮಪ್ಪ ರೂಪುಮಂ ವಿಗುರ್ವಿಸಿ ಕೊಲ್ವೆನೆಂದು ಸಾರ್ದಾಗಳ್ ಕುಮಾರಂ ಸೌಷ್ಠವದೊಳಿರ್ದ್ದನಂ ನೋಡಿ ಕ್ರೋಧಂಗೆಟ್ಟು ಸ್ನೇಹಂ [4]ಪೆರ್ಚೆ[4] ಕಾಮಶರಂಗಳಿಂ [5]ಸ್ಮರ[5]ವಶಹೃದಯೆಯಾಗಿ ಇಂತೆಂದು ತನ್ನೊಳ್ ಬಗೆದೊಳೆಮ್ಮಣ್ಣಂ ತನ್ನ ದೋಷದಿಂ ಸತ್ತೊನೀತಂಗೇನುಂ ದೋಷಮಿಲ್ಲೆಂದು ವಿಕಾರ[6]ಮಪ್ಪ[6] ರೂಪಮನುಪಸಂಹರಿಸಿ ತನ್ನ ಮುನ್ನಿನ ಸ್ವಾಭಾವಿಕಮಪ್ಪ ರೂಪಂ ಕೈಕೊಂಡು ತಮ್ಮಣ್ಣನಂ ಸಂಸ್ಕರಿಸಿ ನೀರಿೞಿದು ತದ್ವಿರಹಾನಳನಿಂ ಬೆಂದು ಕರಗಿ ಕೊರಗಿ ಬಸಮೞಿದಿರ್ದ್ದ ಮೆಯ್ಯನೊಡೆಯೊಳ್ ಬಂದು ಸುನಂದೆಗಿಂತೆಂದಳ್ ನಿನ್ನ ಪ್ರಸಾದದಿಂ ಬಾೞ್ವೆಂ ನೀನೆನಗೆ ಸೋದರಮುಂ ಕಲ್ಯಾಣಮಿತ್ರೆಯುಮಾದಯ್ ಅದಱಿಂ ನೀನೀ ಕುಮಾರಂಗೆ ಪೋಗಿ ಇಂತೆಂದು ಪೇೞು ವಿಜಯಾರ್ಧ ಪರ್ವತದೊಳಗ್ರಮಂದಿರಪುರಾಧಿಪತಿಯಪ್ಪಶನಿವೇಗನೆಂಬ ವಿದ್ಯಾಧರಂಗಂ ವಿದ್ಯುತ್ಪ್ರಭೆಯೆಂಬ ಮಹಾದೇವಿಗಂ ಮಗಳ್ ಸಂಧ್ಯಾವಳಿಯೆಂಬೊಳ್ ನೀಮೆ ಶರಣೆಂದಿರ್ದ್ದೊಳಾಕೆಯಂ ನೀಮಮೋಘಂ ಕೈಕೊಳಲ್ವೇೞ್ಕುಮೆಂದಿಂತು ನುಡಿಯೆಂದು ಕಲ್ಪಿಸಿಯಟ್ಟಿದೊಡಾಕೆಯುಂ ಕುಮಾರಂಗೆ ತದ್ವೃತ್ತಾಂತಮೆಲ್ಲಮಂ ಪೇೞ್ದೊಡಾತನುಂ ಪಿತೃಮಾತೃಗಳೀಯದ ಸ್ತ್ರೀಯರಂ ಕೈಕೊಳ್ವುದೆನಗಯೋಗ್ಯಮೆಂದು ಮಱುಮಾತುಗೊಟ್ಟೊಡೆ ಸುನಂದೆಯೆಂಬೊಳ್ ಮಿತ್ರಸಂಬಂಧಿಗಳಪ್ಪ ಜನಂಗಳ್ ಮುಂ[7]ತಿಟ್ಟು[7] ಕುಡೆ ಕೊಳಲ್ ತಕ್ಕುದೆಂದು ನುಡಿದೊಡಂಬಡಿಸಿ ದಿವ್ಯದೇವತೆಗಳನೆ ಬಾಂಧವಜನಮಾಗೊಡೆಯಳಂ ಮಹಾವಿಭೂತಿಯಿಂದಂ ಪ್ರಾಣಿಗ್ರಹಣ ಪುರಸ್ಸರಂ ಸಂಧ್ಯಾವಳಿಯಂ ಕುಮಾರಂಗೆ ಕೊಟ್ಟಳ್ *ಸಂಧ್ಯಾವಳಿಯುಂ ಸುನಂದೆಯಂ

---

೧. ಗುಣ (ಚ), ಗರಣ (ಛ). ೨. ಳಾ (ಚ, ಛ). ೩. ಜಾರ ಚೋರ (ಘ, ಚ), ಚೋರ ಜಾರ (ಛ). ೪. ಪುಟ್ಟೆ (ಛ). ೫. ಪರ (ಚ, ಛ). ೬. ಸ್ವ (ಕ, ಗ). ೭. ದಿರ್ದು (ಕ, ಖ, ಘ). * * (ಘ, ಚ, ಛ) ಗಳಲ್ಲಿಲ್ಲ.

ಕುಮಾರಂಗೆ ಕೊಟ್ಟಳಿಂ*ತನ್ಯೋನ್ಯ ಸಂಬಂಧದಿಂ ಗಾಂಧರ್ವವಿವಾಹದಿಂ ¹ಕಲ್ಯಾಣದೊಳ್ಕೂಡಿ¹ ಸುಖದಿಂದಿರ್ಪೊರ್

ಅನ್ನೆಗಮಿತ್ತ ಶನಿವೇಗಂ ತನ್ನ ಮಗಂ ಪಿರಿದು ಪೊೞ್ತು ಪೋಗಿ ತಡೆದನೆಂದು ಮಗನವಸ್ಥೆಯನಱಿದು ಬಾಯೆಂದವಲೋಕಿನಿಯೆಂಬ ವಿದ್ಯೆಯನಾರಯ್ಯಲಟ್ಟಿದೊಡಾ ವಿದ್ಯೆಯುಂ ಪಾರಾವತ ರೂಪದಿಂದಾರೈದು ಪೋಪುದಂ ಸಂಧ್ಯಾವಳಿಯಱಿದಿಂತೆಂದು ತನ್ನ ಭರ್ತಾರಂಗೆ ಪೇೞ್ಗುಂ ಸ್ವಾಮಿ ಎನ್ನ ತಂದೆ ವಿದ್ಯಾಧರನಾದ ಮಾನುಂ ಪ್ರಚಂಡ ಮಹಾಬಳ ಪರಾಕ್ರಮಂ ವಜ್ರವೇಗನ ಸಾವನಱಿದಮೋಘಂ ನಿಮ್ಮ ಮೇಲೆ ಬರ್ಕುಮದಱಿಂ ನೀಮೀ ಪ್ರಜ್ಞಪ್ತಿಯೆಂಬ ಮಹಾವಿದ್ಯೆಯಂ ಕೊಳ್ಳಿಮೆನೆ ಕುಮಾರಂ ನಕ್ಕು ಪ್ರಹಸಿತವದ²ನ²ನಾಗಿ ಖೇಚರರೆಂ³ಬೆರಲೆ³ಗಳಂ
೧೯ ⁴ನಿಪಾತಿ⁴ಸಲ್ಕೆನಗೆ ವಿದ್ಯೆ⁵ಯುಂ ಬೇೞ್ಕುಮೆ ಎಂ⁵ದೊಲ್ಲದಿರ್ದೊನ ಪಾದದ್ವಯಂ ಗಳ್ಗೆಱಗಿ ಪೊಡೆವಟ್ಟಮೋಘಂ ಕೊಳಲೆವೇೞ್ಕುಮೆಂದು ಬಲ್ಕಾತಾರದಿಂ ವಿದ್ಯೆಯಂ ಕೊಟ್ಟೊಡಾ ಅವಸರದೊಳ್

ಮತ್ತಿತ್ತ ರಥನೂಪುರ ಚಕ್ರವಾಳ ಪುರಾಧಿಪತಿಯಪ್ಪ ಚಂದ್ರಯಶನೆಂಬ ವಿದ್ಯಾಧರಂಗಂ ವಿದ್ಯುದ್ವೇಗೆಯೆಂಬ ಮಹಾದೇವಿಗಮಂತಿರ್ವರ್ಗಂ ಪುಟ್ಟಿದರ್ ಚಂದ್ರವೇಗನುಂ ಭಾನುವೇಗನುಮೆಂಬರ್ ಮಕ್ಕಳಾಗಿ ಇಂತಿಷ್ಟವಿಷಯಕಾಮ ಭೋಗಂಗಳನುಭವಿಸುತ್ತಿರೆ ಮತ್ತೊಂದು ದಿವಸಂ ನೃಪತಿಗೆ ಸಂಸಾರವೈರಾಗ್ಯಮಾಗಿ ಚಂದ್ರವೇಗನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಕಿಱಿಯಾತನಪ್ಪ ಭಾನುವೇಗಂಗೆ ಯುವರಾಜ ಪಟ್ಟಮಂ ಕಟ್ಟಿ ಗುಣಧರರೆಂಬ ಚಾರಣರಿಸಿಯರ ಪಕ್ಕದೆ ಜೈನದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು ಸಮ್ಮೇದ ಪರ್ವತ
೨೦ ದೊಳ್ ಮೋಕ್ಷಕ್ಕೆ ಪೋದರ್ ಮತ್ತಾ ಚಂದ್ರವೇಗಂಗೆ ನೂರ್ವರ್ ಪೆಣ್ಗೂಸುಗಳಾದೊರವರ್ಗ್ಗಳತಿಶಯ ರೂಪುಲಾವಣ್ಯಮನೊಡೆಯೊರವರನಾ ಅಶನಿವೇಗಂ †ತನ್ನ ಮಗಂ ವಜ್ರವೇಗಂಗನವರತಂ ಪಾಗುಡಮುಂ ಪೆರ್ಗ್ಗಡೆಗಳುಮನಟ್ಟುತ್ತಿರ್ಕ್ಕುಂ ಮತ್ತಂ ಪೆಱರುಂ ವಿದ್ಯಾಧರರ್ಕ್ಕಳನವರತಂ ಕೂಸುಗಳಂ ಬೇಡಿಯಟ್ಟುತ್ತಿರೆ ಆರ್ಗಂ ಕುಡಲೊಲ್ಲದೆ ಮತ್ತೊಂದು ದಿವಸಂ ಮಕ್ಕಳನಾರ್ಗೆ ಕುಡುವಮೆಂದು ದೈವಜ್ಞನಂ ಬೆಸಗೊಂಡೊಡಾತನಿಂತೆಂದು ಪೇೞ್ದಂ ಮಾನಸಸರೋವರದೊಳ್ ಸಿತಯಕ್ಷನಂ ಯುದ್ಧದೊಳಾವೊಂ ಗೆಲ್ವೊಂ ಮತ್ತ ಶನಿವೇಗನ ಮಗಂ ವಜ್ರವೇಗನುಮಂ ಮುಷ್ಟಿಪ್ರಹಾರದಿಂ ಕೊಲ್ವೊನಾ ಅಶನಿವೇಗನುಮಂ ಸಂಗ್ರಾಮದೊಳ್ ನಿಪಾತಿಸುವನಾವನೊರ್ವ್ವನಾತಂಗೆ ನಿಮ್ಮ ಮಗಳಂ ಕುಡಿಮೆಂದು ದೇವಗುರುವೆಂಬ ನೈಮಿತ್ತಿಕಂ ಪೇೞ್ದಂ ಮತ್ತೆಯಾತನುಪದೇಶದಿಂ ತಱಿಸಂದ ಮನದೊ
೩೧ ನಾಗಿ ಸರ್ವಾಯುಧ ಸನ್ನದ್ಧರಾಗಿ ದಿವ್ಯರಥಂಬೆರಸು ಹರಿಶ್ಚಂದ್ರ ಚಂದ್ರಸೇನರ್ಕ್ಕಳೆಂಬ ಮಕ್ಕಳನಟ್ಟಿದೊಡವರ್ಗ್ಗಳುಂ ಬಂದು ಕುಮಾರಂಗೆಱಗಿ ಪೊಡೆವಟ್ಟಂತೆಂದರ್ ರಥನೂಪುರಚಕ್ರವಾಳಪುರೇಶ್ವರನಪ್ಪ ಚಂದ್ರವೇಗಂಗಂ ಮಣಿದೇವಿಗಂ ಪುಟ್ಟಿ

೧. ಕಯ್ಗೂಡಿ (ಘ, ಙ, ಛ) ೨. ನಾರವಿಂದ (ಘ, ಙ). ೩. ಬೊರತಿ (ಕ, ಖ), ಬೊರತ್ತಲೆ (ಗ). ೪. ಹತಿಯಿ (ಘ, ಙ, ಛ). ೫. ಯೇವುದೆಂ (ಘ, ಙ, ಛ). †† (ಘ, ಙ, ಛ) ಗಳಲ್ಲಿ ಈ ಭಾಗ ಇಲ್ಲ.

ದೆವು ಹರಿಶ್ಚಂದ್ರ ಚಂದ್ರಸೇನರ್ಕ್ಕಳೆಮೆಮ್ಮಮ್ಮನ ಬೆಸದಿಂ ನಿಮ್ಮನೋಲಗಿಸಲ್ ಬಂದೆಮೆಂದು ಪೇೞ್ದು ಸುಖಸಂಕಥಾವಿನೋದದಿಂದಿರ್ಪ್ಪನ್ನೆಗಮವರ ಬೞಿಯನೆ ಸಹೋದರರ್ಕ್ಕಳಪ್ಪ ಚಂದ್ರವೇಗನುಂ ಭಾನುವೇಗನುಂ ತಮ್ಮಿಳ್ವ ಸಮಸ್ತಬಲಂ ಬೆರಸು ಕುಮಾರನಂ ಕೂಡಿದರ್

ಮತ್ತಿತ್ತಶನಿವೇಗಂ ತನ್ನ ಮಗನ ಕೞಿದ ವೃತ್ತಾಂತಮೆಲ್ಲಮನವಳೋಕಿನಿಯೆಂಬ ವಿದ್ಯೆ ಪೇೞೆ ಕೇಳ್ದಱಿದು ಮುಳಿದು ಗರ್ಜಿಸಿ ಮಸಗಿ ಸಮಸ್ತ ಬಲಂ ಬೆರಸಿಂದ್ರನ ಮಱೆವೊಕ್ಕಡಮನೋಘಂ ಕೊಲ್ವೆನೆಂದು ಮೇಲೆತ್ತಿಂದನಂ ಚಂದ್ರವೇಗಂ ಕಂಡು ಸನತ್ಕುಮಾರಂಗಿಂತೆಂದಂ ದೇವಾ ನಾನಾವಿಧಮಪ್ಪ ವಿದ್ಯಾಧರ ಯುದ್ಧಮಂ ನೀಂ ಕೆಮ್ಮನೆ ನೋಡುತ್ತಿರಾನೆ ಸಾಲ್ವೆನೆಂದು† [೧]ಸಂಗ್ರಾಮಕ್ಕ[೧]ಭಿಮುಖನಾಗಿ ಕಾದಲ್ ತಗುಳ್ದನಿತ್ತ ಕುಮಾರನುಂ ಗಗನ ತಳದೊಳ್ ವಜ್ರಸಾರಮೆಂಬ ರಥಮನೇಱಿ ಛತ್ರ ಚಾಮರ ಸಿಂಧಾತಪತ್ರ ಪಾಳಿಧ್ವಜ ಪತಾಕಾದ್ಯನೇಕ ಮಹಾ ವಿಭೂತಿಯೊಳ್ ಕೂಡಿ ಸಂಗ್ರಾಮಮುಂ[೨] ನೋಡುತ್ತಮಿರೆ ಮತ್ತಶನಿವೇಗಂ ಕುಮಾರನಂ ಕಂಡು ಕ್ರೋಧಾಗ್ನಿ ಪೆರ್ಚಿ ಎನ್ನ ಮಗನಂ ಕೊಂದೊನಂ ಬೇಗಂ ನೃತ್ಯು [೩]ರಾಜನಂ ಕಾಣ್ಬಂತಿರೆ ಮಾಟ್ಪೆ[೩]ನೆಂದು ಮುಳಿದು ಮಸಗಿ ಬರ್ಪ್ಪನಂ ಕುಮಾರಂ ಕಂಡಾಗಡೆ ಬಾಣಾಸನ ಹಸ್ತನಾಗಿ ಅರ್ಧಚಂದ್ರಮೆಂಬ ಸರದಿಂದಾತನ ತಲೆಯಂ ಮೊಕ್ಕನೆವ್ರೋ[೪]ಗೆಚ್ಚಂ ಅ[೪]ದು ಜ್ವಲನ್ಮಣಿಮುಕುಟಕುಂಡಲಂಗಳಿದೊಪ್ಪುತ್ತಿರ್ದುದು ವಿದ್ಯುತ್ಕಪಾಲಂಬೊಲ್ ನೆಲದೊಳ್ ಬಿೞ್ದುತ್ತಾಗಳಾ ತಲೆಯಂ ಮಱುವಕ್ಕದವರ್ ಕಂಡು ಕೆಲರಂಜಿ ತ್ರಸ್ತಾ[೫]ಭಿಭೂ[೫]ತರಾಗಿಯೋಡಿ ಕೆಲರ್ ಶರಣೆಂದು ಕುಮಾರನ ಕಾಲ್ಗೆಱಗಿ ಪುಲ್ಲಂ ಕರ್ಚಿ ಪೊಡೆವಟ್ಟರ್ ಕುಮಾರನುಮಾಗಳಭಯ ಘೋಷಣೆಯಂ ಪೊಯ್ಸಿಯವರ್ಗ್ಗಭಯ ದಾನಮಂ ಕೊಟ್ಟನಾಗಳ್ ಚಂದ್ರವೇಗನುಂ ಸಂಗ್ರಾಮ ಭೂಮಿ[೬]ಯನರ್ಚಿಸಿ[೬] ಮಹಾವಿಭೂತಿಯಿಂ ಕುಮಾರನನೊಡಗೊಂಡು ಪೋಗಿ ಪೊೞಲಂ ಪೊಕ್ಕು ಪ್ರಶಸ್ತ ದಿನ ವಾರ ನಕ್ಷತ್ರ ಹೋರಾಮುಹೂರ್ತ ಲಗ್ನದೊಳ್ ತನ್ನ ಮಕ್ಕಳ್ ಚಂದ್ರಮತಿ ಚಂದ್ರಶ್ರೀ ಚಂದ್ರಲೇಖೆ ಶಶಿಕಾಂತೆ ಮನೋ[೭]ಹಾರಿಣಿ[೭] ಹರಿಣಾಂಕೆ ಕಮಲಮುಖಿ ಪ್ರಿಯದರ್ಶನೆಯೆಂದಿವರ್ ಮೊದಲಾಗೊಡೆಯ ನೂರ್ವರ್ ಕನ್ನೆಯರ್ಕ್ಕಳಂ ಪಾಣಿಗ್ರಹಣ ಪುರಸ್ಸರಂ [೮]ಕೊಟ್ಟನಂತಾ ನೂರ್ವರ್ ಕನ್ನೆಯರ್ಕ್ಕಳುಂ [೯]ಮುನ್ನಿನ ಖೇಚರಿಯರ್ಕ್ಕಳುಂ[೯] ಪೆಱ[೧೦]ವುಮೆಂದಿವರೊಳ್[೧೦] ಕೂಡಿ ಕುಮಾರಂ ವಿದ್ಯಾಧರ ಶ್ರೇಣಿಯೊಳ್ ಸುಖಮನನುಭವಿಸುತ್ತಿರ್ಪನ್ನೆಗಂ

---

೧. ಕುಮಾರಂಗ (ಘ, ಚ, ಛ). ೨. + ನಡೆ (ಘ, ಚ, ಛ). ೩. ಜಂಗೆ ಪಾಗುಡಮಟ್ಟುವೆ (ಘ, ಚ, ಛ). ೪. ಗಲೆಸುವುದುಮ (ಘ, ಚ, ಛ). ೫. ಭೀ (ಕ, ಖ, ಗ). ೬. ಯಂ ಪೊಱ ಮಟ್ಟು (ಛ). ೭. ರಮೆ (ಘ, ಚ). ೮. +ಕುಮಾರಂಗೆ (ಘ, ಚ, ಛ). ೯. (ಘ, ಚ, ಛ) ಗಳಲ್ಲಿಲ್ಲ. ೧೦. ರ್ ಕನ್ನೆಯರೊಳಂ (ಘ, ಚ, ಛ).

*ಮತ್ತೊಂದು ದಿವಸಂ ಚಂದ್ರವೇಗಂ ಸಿದ್ಧಕೂಟಕ್ಕೆ ವಂದನಾಭಕ್ತಿಗೆ ವೋಗಿ ದೇವರನರ್ಚಿಸಿ ವಂದಿಸಿ ಸುಮಾಳಿಗಳೆಂಬ[೧]ವಧಿ[೧]ಜ್ಞಾನಿಗಳಪ್ಪ ಚಾರಣ ರಿಸಿಯರಂ ಗುರುಭಕ್ತಿ ಗೆಯ್ದು ವಂದಿಸಿ ಧರ್ಮಮಂ ಕೇಳ್ದು ತದನಂತರಮಿಂತೆಂದಂ ಭಟಾರಾ ಸನತ್ಕುಮಾರಂಗಂ ಸಿತಯಕ್ಷಂಗಂ ವೈರಸಂಬಂಧಕ್ಕೆ ಕಾರಣಮೇನೆಂದು ಬೆಸಗೊಂಡೊಡೆ ಭಟಾರರುಂ ತತ್ಸಂಬಂಧಿಯಪ್ಪ ಕಥೆಯನಿಂತೆಂದು ಪೇೞಲ್ ತೊಡಗಿದರ್

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಂಚನಮೆಂಬುದು ಪೊೞಲದನಾಳ್ವೊಂ ಪ್ರತಿಮುಖನೆಂಬರಸನಷ್ಟಶತಮಂತಃಪುರಕ್ಕಧಿಪನಾಗಿ ಕಾಲಂ ಸಲೆ ಮತ್ತಾ ಪೊೞಲೊಳ್ ನಾಗಚಂದ್ರನೆಂಬೊಂ ಸಾರ್ಥಾಧಿಪತಿಯಾತನ ಭಾರ್ಯೆ ವಿಷ್ಣುಶ್ರೀಯೆಂಬೊಳತ್ಯಂತ ರೂಪಲಾವಣ್ಯಸೌಭಾಗ್ಯಕಾಂತಿ ಹಾವಭಾವವಿಳಾಸವಿಭ್ರಮಂಗಳಿಂ ಕೂಡಿದೊ[೨]ಳೊಂದು ದಿವಸಂ ಅರಸನು[೨]ದ್ಯಾನವನಕ್ಕೆ ಪೋಗುತ್ತಂ ಪ್ರಾಸಾದ[೩]ದೊಳಿರ್ದ ದೇವಾಂಗನಾಸನ್ನಿಭೆಯಪ್ಪ[೪]ಳಂ ಕಂಡು ಕಾಮಶರಂಗಳಿಂ ಜರ್ಝರಿತ ಹೃದಯನಾಗಿ [೫]ಮಂ[ತ್ರ][೫] ಪ್ರಯೋಗದಿಂದಂ ವಿಷ್ಣುಶ್ರೀಯನೊಳಕೊಂಡನಾಕೆಯು ಮಾತಂಗಗ್ರ ವಲ್ಲಭೆಯಾಗಿ ಸಲ್ವೊಳಂ [೬]ಸಮಸ್ತಮಂತಃಪುರಮಾ[೬]ಕೆಗೆ ಮುಳಿಯುತ್ತಿ[೭]ರ್ಕುಮೊಂ[೭]ದು ದಿವಸಂ ಸಾರ್ವಭೌಮನೆಂಬ ಪಟ್ಟವರ್ಧನ ಗಜಂ ಸೊರ್ಕಿ ಮಸಗಿ [೮]ಕ[೮]ಟ್ಟುಗಳೆಲ್ಲಮಂ ಪಱಿದು ಹತತವಿತತ ಕೋಳಾಹಳಮೆೞಿದು ಪೊೞಲೆಲ್ಲಮಂ ಕೊಲ್ವುದನರಸಂ ಕೇಳಾನೆಯಂ ಕಟ್ಟಿಸಲೆಂದು ಪೋದನನ್ನೆಗಮಿತ್ತ ಅನಿಬರರಸಿಯರ್ಕಳ್ ನೆರೆದು ವಿಷಪ್ರಯೋಗದಿಂದಂ[೯] ಕೊಂದಾರುಮಱಿಯದಂತಿರೆ ಶ್ಮಶಾನದೊಳೀಡಾ[೧೦]ಡಿದೊ[೧೦]ರನ್ನೆಗಮರಸನುಮಾನೆಯುಮಂ ಕಟ್ಟಿಸಿ ಬಂದರಸಿಯಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೆ ಸತ್ತಳೆಂ[೧೧]ಬಾ[೧೧] ಮಾತಂ ಕೇಳ್ದು ಮೂರ್ಛಿತನಾಗಿ ನೀಡಱಿಂದೆಚ್ಚತ್ತುರ್ ಮಹಾದುಃಖಂ ಗೆಯ್ದು ಶ್ಮಶಾನಕ್ಕಾಕೆಯ ದೇಹಮಂ ನೋಡಲೆಂದು ಪೋಗಿಯದಱ ಭೀಭತ್ಸಮಂ ಕಂಡಾದಮಾನುಂ ಪೇಸಿ ಶರೀರವೈರಾಗ್ಯಮನೊಡೆಯನಾಗಿ ಅನ್ಯಾಯದಿಂ ಪರಸ್ತ್ರೀಹರಣಂಗೆಯ್ದೆಂ ಮಹಾಪಾತಕನೆನೆಂದು ತನ್ನಂ ತಾನಾದಮಾನುಂ ನಿಂದಿಸಿ ವಿಮಳವಾಹನನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಸುವ್ರತರೆಂಬಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಪಲಕಾಲಂ ತಪಂಗೆಯ್ದು[೧೨] ಸಮಾಧಿ ಮರಣದಿಂ ಮುಡಿಪಿ ಪ್ರಾಣತಕಲ್ಪದೊಳಿಪ್ಪತ್ತು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊಂ ಪ್ರತೀಂದ್ರನಾಗಿ ಪುಟ್ಟಿ ದೇವಲೋಕದ ದಿವ್ಯ

---

* (ಖ) ದಲ್ಲಿ ನಷ್ಟವಾಗಿದೆ. ೧. ದಿವ್ಯ (ಘ, ಚ, ಛ). ೨. ಳ್ ಮತ್ತಾ ಪ್ರತಿಮುಖನೊಂದು ದಿವಸಂ ಬಹಿರು (ಘ, ಚ, ಛ). ೩. +ತಳ (ಘ, ಚ, ಛ). ೪. +ವಿಷ್ಣುಶ್ರೀಯಂ (ಘ, ಚ, ಛ). ೫. ಮಂತ್ರಿಯ (ಕ, ಖ, ಗ), ಮಂತ್ರಿ (ಘ, ಚ, ಛ). ೬. ಕಂಡಾತನುಳಿದರಸಿಯರಾ (ಘ, ಚ, ಛ). ೭. ರ್ದೊರ್ಗಂ (ಘ, ಚ, ಛ). ೮. ಕಾಲ್ಗ (ಘ, ಚ, ಛ). ೯. + ವಿಷ್ಣುಶ್ರೀಯಂ (ಘ, ಚ, ಛ). ೧೦. ಡಿಸಿದೋ (ಚ). ೧೧. ದೊಡಾ (ಚ). ೧೨. + ಸಮ್ಯಗ್ದರ್ಶನ ಜ್ಞಾನ ಚಾರಿತ್ರಮಂ ಸಾಧಿಸಿ (ಘ, ಚ, ಛ).

ಸುಖಮಂ ಪಲಕಾಲಮನುಭವಿಸಿ ಬಂದಿಲ್ಲಿ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕನಕ[೧]ಮೆಂಬುದು ಪೊೞಲದನಾಳ್ವೊಂ ಹರಿವಾಹನ ನೆಂಬರಸಂ ಮತ್ತಮಾ ಪೊೞಲೊಳ್ ರಾಜಶ್ರೇಷ್ಠಿ ಅರ್ಹದ್ದಾಸನೆಂಬೊನಾತನ ಭಾರ್ಯೆ ಜಿನದತ್ತೆಯೆಂಬೊಳಾ ಇರ್ವ್ವರ್ಗ್ಗಂ ಮಗಂ ಜಿನವರ್ಮನೆಂಬೊನಾಗಿ ಪುಟ್ಟಿ ರೂಪಲಾವಣ್ಯ ಸೌಭಾಗ್ಯ ಕಾಂತಿತ್ವದಿಂದಾದಮಾನುಂ ನೆಱೆದೊನಾಗಿ ಇಂತು ಕಾಲಂ ಸಲೆ ಅರ್ಹದ್ದಾಸಂಗೇನಾನುಮೊಂದು ಕಾರಣದಿಂ[೨]ದಂ ವೈರಾಗ್ಯಮಾಗಿ ಜಿನವರ್ಮಂಗೆ ರಾಜಶ್ರೇಷ್ಠಿ ಪದಮಂ ಕೊಟ್ಟು ಶಿವಗುಪ್ತಾಚಾರ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು [೩]ತಪಂಗೆಯ್ದು[೩] ಮೋಕ್ಷಕ್ಕೆ ವೋದನ್ ಮತ್ತಿತ್ತ ಜಿನ ವರ್ಮನುಂ ಪಲವುಂ ಜಿನಾಲಯಂಗಳಂ ಮಾಡಿಸಿ ದಾನಪೂಜೆ ಶೀಲೋಪವಾಸ ಮೆಂದಿಂತು ಚತುರ್ವಿಧಮಪ್ಪ ಶ್ರಾವಕಧರ್ಮದೊಳಗ್ಗಳನಾಗಿ ನೆಗೞುತ್ತಮಿಂತು ಪಲಕಾಲಂ ಸಲೆ

ಮತ್ತಾ ಮುನ್ನಿನ ಭವದ ನಾಗಚಂದ್ರನೆಂಬೊಂ ಸಾರ್ಥಾಧಿಪತಿ ವಿಷ್ಣು ಶ್ರೀಯೆಂಬ ತನ್ನ ಭಾರ್ಯೆಯ ವಿಯೋಗಂ ಕಾರಣಮಾಗಿ ಆರ್ತಧ್ಯಾನದಿಂ ಸತ್ತು [೪]ತಿರ್ಯಙ್ನರ[೪]ಕಾದಿಗಳೊಳ್ ಪಲಕಾಲಂ ತೊೞಲ್ದೀ ಭರತಕ್ಷೇತ್ರದೊಳ್ ಕಪಿಲ ನೆಂಬ ಪಾರ್ವ್ವಂಗಂ ಗಂಗೆಯೆಂಬ ಪಾರ್ವ್ವಂತಿಗಂ ಭಾರದ್ವಾಜನೆಂಬ ಮಗನಾಗಿ ಪುಟ್ಟಿ ಕನಕದಂಡಿಯೆಂಬ ಪರಿವ್ರಾಜಕಂಗೆ ಶಿಷ್ಯನಾಗಿ ನಾನಾದೇಶಂಗಳಂ ವಿಹಾರಿಸುತ್ತಂ ಕನಕಪುರಕ್ಕೆ ವಂದು ಮಾಸೋಪವಾಸಂಗೆಯ್ಯುತ್ತಂ ಮಹಾ ತಪಸ್ವಿಯಾಗಿ ನೆಗೞುತ್ತಿರೆ ತತ್ಪುರಾಧಿಪಂ ಹರಿವಾಹನನೆಂಬರಸಂ ಕಂಡಾದ ಮಾನುಮಾ ತಪಸ್ವಿಗೆ ಭಕ್ತನಾಗಿ ಬೆಸಕೆಯ್ಯೆ ಕಾಲಂ ಸಲೆ ಮತ್ತೊಂದು ದಿವಸ ಮರಸನೊಡನೆ ಜಿನವರ್ಮನಾ ಪರಿವ್ರಾಜಕನ ನಿವಾಸಕ್ಕೆ ವೋದೊಡೆ ಜಿನವರ್ಮನಂ ಕಂಡು [೫]ಪೂರ್ವ ವೈರ[೫]ಸಂಬಂಧದಿಂದಾದ ಕ್ರೋಧಾಗ್ನಿ ಪೆರ್ಚಿ ಮುೞುಗುತಿರ್ದ್ದ ಮನಮನೊಡೆಯ [೬]ತಪಸ್ವಿಯ[೬]ನರಸನಿಂತೆಂದಂ ನೀಮೆಮ್ಮ ಮನೆಯೊಳ್ [೭]ಪಾರಿಸಲ್ವೇೞ್ಪುದೆಂ[೭]ದು ಪ್ರಾರ್ಥಿಸಿದೊಡಾತನಿಂತೆಂದಂ ಒಂದು ಪಾಂಗಿನೊಳ್ ನಿಮ್ಮ ಮನೆಯೊಳ್ [೮]ಪಾರಿಸು[೮]ವೆನೀ ಜಿನವರ್ಮನ ಬೆನ್ನೊಳಡಿಯಿಲ್ಲದ ತಳಿಗೆಯ ನಿಟ್ಟು ಬಿಸಿಯ ತುಯ್ಯಲನುಣ್ಬುದೆನಗಟ್ಟಿಯಿ ಪಾಂಗಿನೊಳೆನ್ನನೂಡಲಾರ್ಪೊಡುಣ್ಬೆ ನಲ್ಲದಾಗಳುಣ್ಣೆನೆಂದು ಪೇೞ್ದೊಡೆ ಕೇ[೯][ಳ್ದಚ್ಚಿ][೯]ಗನಾದರಸನಂ ಜಿನವರ್ಮಂ ಕಂಡಿಂತೆಂದಂ ದೇವಾ ತಪಸ್ವಿಗಾವ ಪಾಂಗಿನೊಳ್ ಮೆಚ್ಚು ಮೆಚ್ಚಿದ ಪಾಂಗಿ ನೊಳುಣ್ಗೆಂದೊಡಂಬಟ್ಟನಾಗಳಾ ಗರ್ಭಸುಖಿಯ ಬೆನ್ನೊಳ್ ಪಿರಿಯ [೧೦]ಪರಿ ಯಾಣಮು[೧೦]ನಿಟ್ಟದಂ ತೆಕ್ಕನೆ ತೀವಿ ಬಡ್ಡಿಸಿದೊಡೆ ಕುದಿಯುತ್ತಿರ್ದ್ದ ತುಯ್ಯಲಂ [೧೧]ತಣ್ಣಿತ್ತಾಗಿಯಾ[೧೧]ಱುವನ್ನೆಗಂ ಪಾರುತ್ತಿರ್ದ್ದ ನೀಡುಂ ಬೇಗಮುಂಡು ಸಮೆದ

೧. + ಪುರ (ಛ). ೨. ದಾದಮಾನುಂ (ಘ, ಚ, ಛ). ೩. ಸಮ್ಯಗ್ದರ್ಶನ ಜ್ಞಾನ ಚಾರಿತ್ರಮಂ ಸಾದಿಸಿ (ಘ, ಚ, ಛ). ೪. ನರಕತಿರಿ (ಕ, ಗ). ೫. (ಕ, ಗ)ಗಳಲ್ಲಿಲ್ಲ. ೬. (ಕ, ಗ) ಗಳಲ್ಲಿಲ್ಲ. ೭. ಪರಸಲ್ವೇೞ್ಪುದೆಂ (ಕ, ಖ, ಗ). ೮. ಪರಸು (ಕ, ಖ, ಗ). ೯. ಕಗಿಜ್ಜಿ (ಕ, ಗ), ಳ್ದುಜ್ಜು (ಘ, ಚ, ಛ). ೧೦. ತಳಿಗೆಯ (ಘ, ಚ, ಛ). ೧೧. ತನ್ನಿಂ ತಾನಾ (ಕ, ಗ).

ಬೞಿಕ್ಕೆ ತಳಿಗೆಯನೆತ್ತಿದೊಡಾ ತಳಿಗೆಯೊಡನೆ ಬೆನ್ನ ತೊ[೧]ವ[೧]ಲೆಲ್ಲಮೆದ್ರ್ದು ಪೋದುದ ನರಸಂ ಕಂಡೀತಂ ತಪಸ್ವಿಯಲ್ಲಂ* ರಾಕ್ಷಸಂ ಪಂಚಮಹಾಪಾತಕನನೀ ಪೊೞಲೊಳಿರಲೀಯದಟ್ಟ ಕೆ[೨]ಳೆಯಿ[೨]ಮೆಂದು ನೃಪತಿ ಮುಳಿದೊಡೆ ಜಿನವರ್ಮ್ಮಂ ತಪಸ್ವಿಗೆ ಮುಳಿಯಲ್ವೇಡೆಂದು ಬಾರಿಸಿ ಈತಂಗೇನುಂ ದೋಷಮಿಲ್ಲೆನ್ನ ಪೂರ್ವ್ವಕೃತ[೩]ಕರ್ಮ್ಮ[೩]ಫಳವಿಪಾಕಮೆಂದು ನೃಪತಿಗೆ ಪೇೞ್ದು ಪರಿವ್ರಾಜಕಂಗೆ ನಿಶ್ಶಲ್ಯಂಗೆಯ್ದು ರಸನುಮಂ ಸ್ವಜನ ಪರಿಜನ ಬಂಧುವರ್ಗ್ಗಮುಮಂ ಬಿಡಿಸಿ ಶ್ರೀವರ್ಮ್ಮರೆಂಬಾಚಾರ್ಯ್ಯರ ಪಕ್ಕದೆ ದೀಕ್ಷೆಯಂ ಕೈಕೊಂಡು ಮಹಿಷಗಿರಿಯೆಂಬ ಪರ್ವ್ವತದೊಳೀಪು[೪][ಣ್]‌[೪] ತೀರ್ವ್ವನ್ನೆಗಂ ಕೈಯನೆತ್ತಿಕೊಳ್ಳೆನೆಂದು ಕಾಯೋತ್ಸರ್ಗ್ಗದಿಂ ನಿಂದೊನಂ ಗೃಧ್ರವಾಯಸಾದಿಗಳ್ ಪುಣ್ಣಂ ತೋಡಿ ತಿನೆ ಮೇರುಪರ್ವ್ವತಂಬೊಲಚಳಿತಧೈರ್ಯ್ಯನಾಗೊಂದು ತಿಂಗಳ್ವರೆಗಂ ಸೈರಿಸಿ[೫] ಸಮಾಧಿಮರಣದಿಂ ಮುಡಿಪಿಯಚ್ಯುತಕಲ್ಪದೊಳಿರ್ಪ್ಪತ್ತೆರಡು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊನಚ್ಯುತೇಂದ್ರನಾಗಿ ಪುಟ್ಟಿಯಲ್ಲಿಯ ದೇವಲೋಕದ ದಿವ್ಯಸುಖಮಂ ಪಲಕಾಲಮನುಭವಿಸಿ ಬಂದಿಲ್ಲಿ ಸನತ್ಕುಮಾರನಾದನಾ ಪರಿವ್ರಾಜಕನುಮಾಯಚ್ಯುತೇಂದ್ರಂಗೆ ವಾಹನದೇವನಾ[೬]ದೊನ[೬]ಲ್ಲಿಂ ಬೞ್ಚಿಬಂದಿಲ್ಲಿ ಚತುರ್ಗ್ಗತಿ ಸಂಸಾರದೊಳ್ ನೀಡುಂ ತೊೞಲ್ದಂಜನಗಿರಿಯೆಂಬ ಪರ್ವ್ವತದ ತಟದೊಳ್ ತಾಪಸಾಶ್ರಮದೊಳ್ ವಸಿಷ್ಠನೆಂಬ ತಾಪಸಂಗಂ [೭]ಘೂಕೆ[೭]ಯೆಂಬ ತಾಪಸಿಗಂ [೮]ಬಕ[೮]ನೆಂಬೊಂ ಮಗನಾಗಿ ಪುಟ್ಟಿ ತಾಪಸ ತಪಮಂ ಕೈಕೊಂಡು ನೆಗೞ್ದು ಮಡಿದು ಸಿತಯಕ್ಷನಾದನೆಂದಿಂತಿರ್ವ್ವರ ಪೂರ್ವ್ವಭವವೈರಸಂಬಂಧಿಯಪ್ಪ ಕಥೆಯಂ ಸವಿಸ್ತರಮಾಗಿ ಸುಮಾಳಿಗಳೆಂಬವಧಿಜ್ಞಾನಿಗಳಪ್ಪ ಚಾರಣರಿಸಿಯರ್ ಪೇೞೆ ಎಮ್ಮ ಸ್ವಾಮಿಯಪ್ಪ ಖಚರೇಂದ್ರಂ ಕೇಳ್ದಾದವಾನುಂ ಸಂತುಷ್ಟಚಿತ್ತನಾಗಿ ಭಟಾರರಂ ಬಂದಿಸಿ ತನ್ನ ಪೊೞಲ್ಗೆ ಪೋದನ್

ಎಂದಿಂತು ಕಥಾಸಂಬಂಧಮೆಲ್ಲಮಂ ಕಮಳಮತಿಯೆಂಬ ಖೇಚರವಿಳಾಸಿನಿ ಸನತ್ಕುಮಾರಂ ಪೇೞವೇೞ್ದೊಡೆ ಮಹೇಂದ್ರಸಿಂಹಂಗೆ ಪೇೞ್ದೊಳಾ [೯]ಅವಸರ[೯]ದೊಳ್ ಕುಮಾರಂ ನಿದ್ರಾಸುಖವಿಮುಕ್ತನಾದೊಡಾತನ ಸಮೀಪಕ್ಕೆ ಮಹೇಂದ್ರಸಿಂಹಂ ಪೋಗಿ ಇಂತೆಂದಂ[೧೦] ನಿನ್ನ ವಿಯೋಗದೊಳಪ್ಪ ದುಃಖದಿಂದಂ [೧೧]ವಿಶ್ವಸೇನ ಮಹಾರಾಜನುಂ ಸಹದೇವಿ ಮಹಾದೇವಿ ಮೊದಲಾಗೊಡೆಯವರ್ಗ್ಗಳೆಲ್ಲಂ ಪ್ರಾಣಸಂದೇಹಮಾಗಿರ್ಕ್ಕು[೧೧]ಮದಱಿಂ ನಿಮ್ಮ ಪೊೞಲ್ಗೆ [೧೨]ಪೋಗಲ್ವೇೞ್ಕು[೧೨]ಮೆಂದು ಪೇೞ್ದೊಡಾತನುಮಂತೆಗೆಯ್ವೆನೆಂದು ತಮ್ಮ ಮಾವಂಗಳಂ [೧೩]ಬಿಡಿ[೧೩]ಸಿ ವಿಚಿತ್ರಮಪ್ಪ ರಥಗಜ ತುರಗ ಗರುಡ ಕಳಹಂಸ ಮಯೂರ ಮಕರ ಸಿಂ[೧೪]ಹ ವಿಮಾನಾಧಿರೂಢರ್ಕ್ಕಳಪ್ಪ[೧೪] ವಿದ್ಯಾಧರರ್ಕ್ಕಳುಮಷ್ಟಸಹಸ್ರ ಸಂಖ್ಯಾ ಪ್ರಮಾಣಮಪ್ಪರಸಿ

೧. ಗ (ಕ, ಗ). ೨. ಳಿಪಿ (ಘ, ಚ, ಛ). ೩. (ಕ, ಖ, ಗ) ಗಳಲ್ಲಿಲ್ಲ. ೪. ೦ಣು (ಸ). ೫. +ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ (ಘ, ಚ, ಛ). ೬. ನಾಗಿ ಪುಟ್ಟಿಯು(ಕ,ಖ,ಗ). ೭. ಗರ್ಘ್ಯಂಗೆ (ಕ, ಖ, ಗ). ೮. ಜಠರ (ಕ, ಖ, ಗ). ೯. ಪ್ರಸ್ತಾವ (ಘ, ಚ, ಛ). ೧೦. +ನಿನ್ನ ತಾಯ್ಗಂ ತಂದೆಗಂ (ಚ, ಛ). ೧೧. ಪ್ರಾಣಸಂದೇಹಕ್ಕೆ ವಂದಿರ್ಕುಂ (ಚ, ಛ). ೧೨. ಬೇಗಂಪೋಪ (ಚ, ಛ). ೧೩. ಬರಿ (ಕ, ಗ). ೧೪. ಹಾದ್ಯನೇಕ ವಿವಿಧ ವಾಹನಾರೂಢರ್ಕಳುಮಪ್ಪ (ಛ).

ಯರ್ಕ್ಕಳುಂ ಬೆರಸು ಮಹಾವಿಭೂತಿಯಿಂದಂ ಬಂದು ಹಸ್ತಿನಾಪುರಮಂ ಪೊಕ್ಕು ನಿಬರುಂ ವಿಶ್ವಸೇನಮಹಾರಾಜಂಗಂ ಸಹದೇವಿ ಮಹಾದೇವಿಗಂ ಸಾಷ್ಟಾಂಗ ಮೆಱಗಿ ಪೊಡೆವಟ್ಟು ಅವರಾಶೀರ್ವಚನ ಶತಸಹಸ್ರಂಗಳನಾಂತು ಕೊಂಡು ಸುಖ ದಿಂದಿರೆ ಸನತ್ಕುಮಾರಂಗೆ ಚಕ್ರಂಪುಟ್ಟಿ ಸಕಳ ಚಕ್ರವರ್ತಿಯಾಗಿ ಭೋಗೋಪ ಭೋಗಂಗಳೆಂಬ ಮಹಾ ಸಮುದ್ರದೊಳ್ ಪಲಕಾಲಂ ಕ್ರೀಡಿಸುತ್ತಿರ್ಪನ್ನೆಗಂ

ಮತ್ತೊಂದು ದಿವಸಂ ಸೌಧರ್ಮ ಕಲ್ಪದೊಳಾ ಸೌಧರ್ಮೇಂದ್ರಂ ತನ್ನ ದೇವ ಸಭೆಯ ನಡುವೆ ಸಿಂಹಾಸನ ಮಸ್ತಕಸ್ಥಿತಂ ದೇವರ್ಕ್ಕಳಿಂ ಪರಿವೇಷ್ಟಿತನಾಗಿ [೧]ಸೌದಾ[ಮಿ]ನಿ[೧]ಯೆಂಬ ನಾಟಕಮಂ ನೋಡುತ್ತಿರ್ಪನ್ನೆಗಂ ಈಶಾನಕಲ್ಪ ದಿಂದಂ [೨]ಸಹೋ[೨]ತ್ಪನ್ನ ಸಂಗಮದೇವಂ ಬಂದು ಸೌಧರ್ಮೇಂದ್ರನ ಸಭೆಯ [೩]ನವಯವ[೩]ದಿಂ ಪೊಕ್ಕಿರ್ದ್ದಾಗಳಾ ಸಭೆಯೊಳಿರ್ದ್ದ ದೇವರ್ಕಳ ರೂಪುಂ ತೇಜಮುಂ ಲಾವಣ್ಯಮುಮೆಲ್ಲಮಂ ಮಾಸಿಸಿ ತನ್ನ ತೇಜಮೆಯಗ್ಗಳವಾಗಿರ್ದ್ದೊಡೆಂತು ಚಂದ್ರ ನುದಯಂಗೆಯ್ದಾಗಳ್ ಗ್ರಹನಕ್ಷತ್ರತಾರೆಗಳ ತೇಜಂ ಕುಂದುಗುಮಂತೆಲ್ಲರ ತೇಜ ಮುಮಂ ಕುಂದಿಸಿ ತಾನೆಯಗ್ಗಳಮಾಗೆ [೪]ಬೆಳಗುತ್ತಿರ್ದೋನಂ[೪] ದೇವರ್ಕ್ಕಳೆಲ್ಲಂ ವಿಸ್ಮಯಂಬಟ್ಟು ನೋಡಿ ಸೌಧರ್ಮೇಂದ್ರನನಿಂತೆಂದು ಬೆಸಗೊಂಡರ್ ಸ್ವಾಮಿ ಈ ಸಂಗಮನೆಂಬ ದೇವನತಿಶಯಮಪ್ಪ ರೂಪುಂ ಲಾವಣ್ಯಮುಂ ತೇಜಮುಂ ದ್ವಾದ ಶಾದಿತ್ಯರ್ಕ್ಕಳೊರ್ಮೊದಲೆ ಉದಯಂಗೆಯ್ದಂತೆ ಬೆಳಗಿದಪ್ಪುದೇಕಾರಣದಿಂದಾದು ದೆಂದು ಬೆಸಗೊಂಡೊಡಿಂತೆಂದು ಸೌಧರ್ಮೇಂದ್ರಂ ಪೇೞಲ್ ತೊಡಗಿದನ್

ಈತಂ ಮುನ್ನಿನ ಭವದೊಳ್ ಈ ಜಂಬೂದ್ವೀಪದ[೫] ಪೂರ್ವವಿದೇಹದೊಳ್ [೬]ಸೀತೆಯೆಂಬ ತೊಱೆಯ ಬಡಗಣ ದೆಸೆಯೊಳ್[೬] ಪುಷ್ಕಳಾವತಿಯೆಂಬುದು ನಾಡಲ್ಲಿ ಪುಂಡರೀಕಿಣಿಯೆಂಬುದು ಪೊೞಲದನಾಳ್ವೊಂ ಸಕಳ ಚಕ್ರವರ್ತಿ ವಿಮಳವಾಹನ ನೆಂಬರಸನಾತನ ಮಹಾದೇವಿ [೭]ವಿಮುಳ[೭]ಮತಿಯೆಂಬೊಳಾ ಇರ್ವ್ವರ್ಗ್ಗಂ ಪುಟ್ಟಿದೊಂ ಮಗಂ ಕ್ಷೀರಕುಮಾರನೆಂಬೊನಾತಂ ವೈರಾಗ್ಯಮನೊಡೆಯನಾಗಿ ತಪಂಬಡಲ್ಕೆಂದು ಬಗೆದಿರ್ದ್ದೊಡೆ ತಾಯ್ ತಪಂಬಡಲೀಯದೆನಿತಾನುಂ ತೆಱದಿಂ ನುಡಿದು [೮]ತಗುಳ್ದೊಡೆ[೮] ತಾಯ ವಚನಮನತಿಕ್ರಮಿಸಲಾಱದೆ ಮನೆಯೊಳಿರ್ದ್ದಂತೆ ಬ್ರಹ್ಮಚರ್ಯಂ ಮೊದಲಾಗೊಡೆಯ ಬ್ರತಂಗಳಂ ಪ್ರತಿಪಾಳಿಸಿ [೯]ಆಚಾಮ್ಲವರ್ಧನ[೯] ಮೆಂಬ ನೋಂಪಿಯಂ ಪನ್ನೆರಡು ವರ್ಷಂಬರಂ ನೋಂತು ಸಮಾಧಿಮರಣದಿಂದಂ ಮುಡಿಪೆ ಇಂತಪ್ಪ ರೂಪುಂ ತೇಜಮುಂ ಲಾವಣ್ಯಮುಮದಱಿಂದೀತಂಗಾದುದೆಂದು ಸೌಧರ್ಮೇಂದ್ರಂ ಪೇೞ್ದೊಡೆ ಮತ್ತಂ ದೇವರ್ಕ್ಕಳಿಂತೆಂದು ಬೆಸಗೊಂಡರ್ ಸ್ವಾಮಿ ಈತನಂತಪ್ಪ ರೂಪುಂ ತೇಜಮುಂ ಲಾವಣ್ಯಮುಮನೊಡೆಯರ್ ಪೆಱರಾರಾನು ಮೊಳರೆ ಎಂದು ಬೆಸಗೊಂಡೊಡೆ ಸೌಧರ್ಮೇಂದ್ರ[೧೦]ನೆಂದನೊಳನ್[೧೦] ಹಸ್ತಿನಾಪುರ

೧. ಸೋೞಕಾಮಣಿ(ಕ,ಖ,ಗ), ಸೌದಾಮನಿ(ಘ,ಚ,ಛ). ೨. ಸಾಹಸೋ (ಘ,ಚ,ಛ). ೩. ನೆವ (ಘ, ಚ, ಛ). ೪. ಸಭೆಯೊಳಿರ್ದ (ಕ, ಖ, ಗ). ೫. + ಭರತದ (ಖ). ೬. (ಘ, ಚ, ಛ) ಗಳಲ್ಲಿಲ್ಲ. ೭. ಲಕ್ಷ್ಮೀ(ಘ, ಚ, ಛ). ೮. ನಿಲಿಸಿದೊಡೆ (ಘ, ಚ, ಛ). ೯. ಯಾಯಲವರ್ಧಮಾನ (ಕ, ಗ), ಯಾಯಲವರ್ಗಮಾನ(ಖ), ಯಾಯಂಬಿಲವರ್ಧಮಾನ (ಚ). ೧೦. ನೊರ್ವನೊಳನಾತಂ (ಛ).

ದೊಳ್ ಕುರುವಂಶದಾತಂ. ಸನತ್ಕುಮಾರನೆಂಬೊಂ[೧] ಚಕ್ರವರ್ತಿಯಾತಂ[೨] ದೇವರ್ಕಳ ರೂಪುಂ ಲಾವಣ್ಯಮುಂ ತೇಜಮುಮನೊಡೆಯನಾದಮಾನುಮಗ್ಗಳಮೆಂದು ಪೇೞ್ದೊಡೆ

ಇಂದ್ರನ ಮಾತಂ ನಂಬದೆ ವಿಜಯ ವೈಜಯಂತರೆಂಬರಿರ್ವರ್ ದೇವರ್ಕಳ್ ಪಾರ್ವರ ರೂಪಂ ಕೈಕೊಂಡು ಹಸ್ತಿನಾಪುರಕ್ಕೆ ಸನತ್ಕುಮಾರ ಚಕ್ರವರ್ತಿಯ ರೂಪಂ ನೋಡಲೆಂದು ಬಂದು ಬಾಗಿಲೊಳಿರ್ದ್ದ ಪಡಿಯಱರನೆಂದರ್ ನಿಮ್ಮರಸಂಗಿಂತೆಂದು ಪೇೞಿಂ ಗೆಂಟಱಿಂ ಬಂದೆ[೩]ವು[೩] ನಿಮ್ಮ ರೂಪನಱ್ತಿವಟ್ಟು ನೋಡಲ್ಕೆಂದೊಡವರುಂ ಪೋಗಿ ತಮ್ಮರಸಂಗಱಿಪಿದೊಡೆ ಅರಸನನುಮತದಿಂದವರರಮನೆಯಂ ಪೊಕ್ಕರಸನ ಸಾರೆವೋಗಿ ನೋೞ್ಪಾಗಳರಸಂ ಸುಗಂಧ ತೈಲದಿಂ ಮೆಯ್ಯನಭ್ಯಂಗನಂಗೆಯ್ದು ಮಜ್ಜನಂಬುಗಲೆಂದಿರ್ದ್ದವಸರದೊಳ್ ದೇವರ್ಕಳ್ ಸನತ್ಕುಮಾರ ಚಕ್ರವರ್ತಿಯ ರೂಪಂ ವಾಳಾಗ್ರದಿಂ ತೊಟ್ಟು ನಖಾಗ್ರಂಬರೆಗಂ ನಖಾಗ್ರದಿಂ ತೊಟ್ಟು ವಾಳಾಗ್ರಂಬರೆಗಂ [೪]ಏಱಿಯುಮಿೞಿಯೆಯುಂ[೪] ನೀಡುಂ ಭಾವಿಸಿ ನೋಡಿ ಚೋದ್ಯಂಬಟ್ಟಂತು ರೂಪುಂ ತೇಜಮುಂ ಗಾಡಿಯುಂ ಯೌವನಮುಂ ದೇವರ್ಕಳ್ಗಮಿಲ್ಲೆಂದು ಚಕ್ರವರ್ತಿಯ ರೂಪಂ ಪೊಗೞ್ದೊಡರಸನಿಂತೆಂದಂ ನೀಮಾರ್ಗ್ಗಳೇನೆಂಬಿರೆಲ್ಲಿಂ ಬಂದಿರೆಂದು ಬೆಸಗೊಂಡೊಡವರೆಂದರ್ ದೇವಲೋಕದಿಂ ಬಂದೆ[೫]ವು ದೇವರ್ಕಳೆವು ಸೌಧರ್ಮಕಲ್ಪದೊಳ್ ದೇವರ್ಕಳ ಸಭೆಯ ನಡುವೆ ಸೌಧರ್ಮೇಂದ್ರಂ ನಿಮ್ಮ ರೂಪನಾದಮಾನುಂ ನಚ್ಚಿ ಬಣ್ಣಿಸಿದೊಡಿಂದ್ರನ ಮಾತಂ ನಂಬದೆ ನಿಮ್ಮಂ ನೋಡಲ್ ಬಂದೆಮಿಂದ್ರನ ವ್ಯಾವರ್ಣಿಸುವುದರ್ಕ್ಕಗ್ಗಳಮೆ ನಿಮ್ಮ ರೂಪುಂ[೬] ಯವ್ವನಮುಂ ಲಾವಣ್ಯಮುಮಂ ಕಂಡೆಮೆಂದು ಪೇೞ್ದಾಮಿನ್ನೆಮ್ಮ ದೇವಲೋಕಕ್ಕೆ ಪೋಪೆಮೆಂದೊಡರಸಂ ಮನಂ ಪೆರ್ಚಿ[೭]ತನ್ನೊಳ್ ತನ್ನ ರೂಪಂ ನಚ್ಚಿ[೭] ಕಿಱಿದು ಬೇಗಂ ಮಾಣಿಮಭ್ಯಂಗನಂ ಗೆಯ್ದ ರೂಪಂ ಕಂಡಿರಿಂ ಮಜ್ಜನಂಬೊಕ್ಕು ಪಸದನಂಗೊಂಡಿರ್ದ್ದ ರೂಪಂ ನೋಡಿ [೮]ಪೋಗಿ[೮]ಮೆಂದರಸಂ ನುಡಿದೊಡಂತೆ ಗೆಯ್ವೆಮೆಂದು ದೇವರ್ಕಳಿರ್ದ್ದೊಡರಸನುಂ ಮಜ್ಜನಂಬೊಕ್ಕು ಬೇಗಂ ಸರ್ವಾಭರಣ ಭೂಷಿತನಾಗಿ ಆಸ್ಥಾನ ಮಂಟಪದೊಳ್ ಸಿಂಹಾಸನ ಮಸ್ತಕಸ್ಥಿತನಾಗಿ ಸಾಮಂತ ಮಹಾಸಾಮಂತರ್ ಮೂವತ್ತಿರ್ಛಾಸಿರ್ವರ್ ಮಕುಟ ಬದ್ಧರ್ಕಳುಂ ವಿದ್ಯಾಧರರ್ಕಳುಂ [೯]ಯಕ್ಷದೇವರ್ಕಳುಂ[೯] ಬಳಸಿಯುಮಿರ್ದೋಲಗಿಸೆ [೧೦]ಮೂವತ್ತೆರಡುಂ[೧೦] ಚಾಮರಂಗಳಿಕ್ಕೆ ಸೌಧರ್ಮೇಂದ್ರನಿಪ್ಪಂತಿರ್ದು ದೇವರ್ಕಳ್ಗೆ ಬಱಿಯಟ್ಟಿ ಬರಿಸಿ ನೋಡಿಮಿನ್ನೆನ್ನ ರೂಪನೆಂದು ತನ್ನಂ ತೋಱಿದೊಡೆ ದೇವರ್ಕಳ್ ನೋಡಿ ವಿಸ್ಮಯಂಬಟ್ಟದೇಂ ಚೋದ್ಯಮೊ

**ಶ್ಲೋಕ||** ಅನೇಕ ರಾಗ ಸಂಕೀರ್ಣಂ ಘನಲಗ್ನ ಮಪಿ ಕ್ಷಣಾತ್ ।
ಮಾನುಷಂ ಯೌವನಂ ಕಷ್ಟಂ ನಶ್ಯತೀಂದ್ರಧನುರ್ಯಥಾ ॥

---

೧. + ಸಕಲ (ಚ, ಛ). ೨. + ಗೆ (ಸ). ೩. ಮುಂ (ಕ, ಖ, ಗ, ಛ). ೪. ಏಱಲುಮಿೞಿಯೆ (ಕ), ಏಱಿಮುಂಮಿೞಿಯೆಯು (ಖ, ಘ, ಚ), ನೇರಲುಮಿೞಿಯೆ (ಗ). ೫. ಮುಂ (ಕ, ಖ, ಗ). ೬. + ತೇಜಮುಂ (ಛ). ೭. ತನ್ನ ರೂಪ ನಚ್ಚಿ (ಕ,ಖ,ಗ). ೮. (ಕ,ಖ,ಗ) ಗಳಲ್ಲಿಲ್ಲ. ೯. (ಘ,ಚ) ಗಳಲ್ಲಿಲ್ಲ. ೧೦. ಮೂವತ್ತಿರ್ವರ್ ವಿಲಾಸಿನಿಯರ್ (ಘ, ಚ), ಮೂವತ್ತಿರ್ವರ್ ಕನ್ನೆಯರ್ (ಛ).

ಎಂ[೧]ದೀ ಕ್ಷಣಮಾತ್ರದೊಳೆ ಮನುಷ್ಯರ ರೂಪುಂ ಗಾಡಿಯುಂ ಚೆಲ್ವುಂ ತೇಜಮುಂ ಯೌವನಮುಂ ಕುಂದಿತ್ತೆನೆ ಚಕ್ರವರ್ತಿಯೆಂದನೆನ್ನ ರೂಪಂ ಮುನ್ನೆ ನೀ[೨]ಮೆ[೨] ಪೊಗೞ್ವಿರೀಗಳೇಕೆ ಪೞಿದಪ್ಪಿರೆನೆ [೩]ದೇವರೆಂದರ್ ಕೇಳರಸಾ[೩] ದೇವರ್ಕಳ [೪]ತೇಜಮುಂ ಲಾವಣ್ಯಮುಂ[೪] ಪುಟ್ಟಿದ ಪ್ರಥಮ ಸಮಯದಿಂ ತೊ[೫]ಟ್ಟು ಪೆರ್ಚುತ್ತುಂ ಪೋಕುಮಾಯುಷ್ಯದ ನಡುವರೆಗಮಲ್ಲಿಂದತ್ತ ಕುಂದುತ್ತುಂ ಪೋಕುಮಾಯುಷ್ಯಾಂತಂಬರೆಗಂ[೫] ಮತ್ತಾಮುಂ ನಿಮ್ಮ ರೂಪಂ ಯೌವನ ಭರದೊಳಿರ್ದುದುಮಂ ಕಂಡೆವೀಗಳಾಯುಷ್ಯಮುಂ ತೇಜಮುಂ ರೂಪುಂ ಲಾವಣ್ಯಮುಂ ಯೌವನಮುಂ[೬] ಕಿಱಿದು ಕುಂದಿದುದಂ ಕಂಡೆಮೆನೆ ಚಕ್ರವರ್ತಿ ನೀಮೆಂತಱಿದಿರೆಂದು ಬೆಸಗೊಂಡೊಡೆ ದೇವರ್ಕಳೆಂದರೆಮಗವಧಿಜ್ಞಾನಮುಂಟಪ್ಪುದಱಿಂದಱಿ[೭]ದೆವು[೭] ಮನುಷ್ಯರ್ಗಱಿಯಲಾಗದೆಂದೊಂದು ದೋಣಿ[೮]ಕೊಂ[೮]ಡಮಂ ತರಿಸಿ ನೀರಂ ತೆಕ್ಕನೆ ತೀವಿಯದಱೊಳಗೆ ಚಮರಿಯನದ್ದಿ ತೆಗೆದು ಬಳಸಿಯುಂ ಬೀಸಿದಾಗಳ್ ಸಭೆಯೊಳಿರ್ದ ಮಾನಸರ ಮೇಗೆಲ್ಲಂ ನೀರ್ ಪನಿತುದಂ ತೋಱಿ ದೇವರೆಂದರ್ ಪೇೞಿಮಾ ಚಮರಿಯೊಳ್ ತಗುಳ್ದು ಬಿಯಮಾದನಿತು ನೀರಂ ಕೊಂಡದೊಳ್ ಕುಂದಿ[೯]ದುದಂ[೯] ತೋಱಿಮೆಂದೊಡವರುಮಱಿಯದಿರ್ದೊಡೆಂತಿದಂ[೧೦] ನೀಮಱಿ[೧೦]ಯಲಾಗದಂತೆ ಮಾನಸರಾಯುಷ್ಯಮುಂ ತೇಜಮುಂ ಲಾವಣ್ಯಮುಂ ಯೌವನಮುಂ ಪ್ರತಿಸಮಯಂ ಕುಂದು[೧೧]ತಿರ್ಕುಮಾ ವೀಚಿಮರಣಮಂ[೧೧] ನಿಮಗಱಿಯಲಾಗದೆಂದು ಪೇೞ್ದು ಹೇತು ದೃಷ್ಟಾಂತಗಳಿಂದಂ ಪ್ರತ್ಯಕ್ಷಮಂ ತೋಱಿ ಚಕ್ರವರ್ತಿಯಂ ನಂಬೆ ನುಡಿದು ದೇವರ್ಕಳ್ ತಮ್ಮ ಸೌಧರ್ಮ ಕಲ್ಪಕ್ಕೆ ವೋದರ್

ಮತ್ತಿತ್ತ ಸನತ್ಕುಮಾರ ಚಕ್ರವರ್ತಿಗದುವೆ [೧೨]ನಿರ್ವೇಗ[೧೨]ಕ್ಕೆ ಕಾರಣಮಾಗಿ ಶರೀರಭೋಗಕ್ಕೆ ಪೇಸಿ ಇಂತೆಂದು ಮನದೊಳ್ ಬಗೆಗುಂ :

**ವೃ||** ರೂಪಂ ಯೌವನಮಾಯುರಕ್ಷವಿಷಯಾ ಭೋಗೋಪಭೋಗಾ ವಪುಃ ।
ವೀರ್ಯಂ ಸ್ವೇಷ್ಟಸಮಾಗಮೋ ವಸುಮತಿಸ್ಸೌಭಾಗ್ಯಭಾಗ್ಯಾದಯಃ ॥
ನೋ ನಿತ್ಯಾಃ ಸ್ಫುಟಮಾತ್ಮನಸ್ಸಮುದಿತ ಜ್ಞಾನೇಕ್ಷಣಾಭ್ಯಾಮೃತೇ ।
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾಽನಿತ್ಯತಾಂ ॥

**ಶ್ಲೋಕ||** ಆದೌ ಜನ್ಮ ಜರಾರೋಗೌ ಮಧ್ಯೇಪ್ಯಂತೇ ಖಳಾಂತಕಃ ।
ಇತಿ ಚಕ್ರೈಕ ಸಂಭ್ರಾಂತಿರ್ಜಂತೋರ್ಮಧ್ಯೇ ಭವಾರ್ಣವಂ ॥

ಎಂದಿಂತು ವೈರಾಗ್ಯಮಂ ಭಾವಿಸಿ ವಿಜಯಕುಮಾರನೆಂಬ ಪಿರಿಯ ಮಗಂಗೆ ರಾಜ್ಯ ಪಟ್ಟಂಗಟ್ಟಿ ಪರಿವಾರಕ್ಕೆಲ್ಲಂ ನಿಶ್ಶಲ್ಯನಾಗಿ ಬಾಹ್ಯಾಭ್ಯಂತರ ಪರಿಗ್ರಹಂಗಳೆಲ್ಲಮಂ

---

೧. ದೊಡೀ (ಘ), ದಾಡಿ (ಚ,ಛ). ೨. ಮುಂ (ಕ, ಖ, ಗ, ಘ, ಛ). ೩. ದೇವರ್ಕಳರಸಾ (ಛ). ೪. ಚೆಲ್ವುಂ ಯೌವನಮುಂ ವಿಭವಮುಂ (ಘ, ಚ, ಛ), ರೂಪುಂಗಾಡಿಯುಂ (ಛ). ೫. ಟ್ಟೆಱು ದಿಂಗಳಾಯುಷ್ಯಮುಂಟೆನೆಪೆಡೆಯೊಳೆಲ್ಲಿಯುಂ ಕಿಡದೇಕಸ್ಥಿತಿಯೊಳ್ ಸ್ಥಿರಮಾಗಿರ್ಕುಮಲ್ಲಿಂದತ್ತ ಕುಂದತ್ತಂ ಪೋಕು (ಘ,ಚ,ಛ). ೬. +ಕಿಱಿ (ಘ,ಚ,ಛ). ೭. ವೆಮುಂ (ಕ,ಗ,ಖ). ೮. ಗೊಂ (ಘ,ಚ). ೯. ದೆಡೆಯುಂ (ಘ, ಚ, ಛ). ೧೦. ನಿಮಗ (ಘ, ಚ, ಛ). ೧೧. ತಿರ್ದುವೀಚಿಯೆಂಬ ಮರಣಮುಮಂ (ಕ, ಖ, ಗ), ರ್ಕುಮಾವಿ ಚಿಮರಮಂ (ಘ, ಚ). ೧೨. ವೈರಾಗ್ಯ (ಛ).

ತೊಱೆದು ಪಲಂಬರ್ ಮಕುಟಬದ್ಧ[೧]ರ್ಕಳಪ್ಪರಸುಮಕ್ಕಳ್ವೆರಸು[೧] ವಿನಯಂಧರ ಭಟಾರರ ಪಕ್ಕದೆ ತಪಂಬಟ್ಟು ದೀಕ್ಷೋಪವಾಸತ್ರಿರಾತ್ರಂ ಗೆಯ್ದು ಶರೀರಸಂಧಾರಣ ನಿಮಿತ್ತಂ ಚರಿಗೆವೊಕ್ಕೊಡೊರ್ವರ್ಗಳ್ ಬಡ[೨]ಬಿರ್ದಿ[೨] ನಿಱಿಸಿ ಪ್ರಥಮ ದಿವಸದೊಳೆ ಪಾರಕಿನ ಕೂೞು[೩]ಮವರೆಯುಮೆಣ್ಣೆ[೩]ಯುಮಾಡಿನಳೆಯುಮಂ ಬಡ್ಡಿಸಿದೊಡದ ನಮೃತಮನುಣ್ಬಂತುಂಡು ಮತ್ತಂ ತ್ರಿರಾತ್ರಕ್ಕೆ [೪]ಪಚ್ಚಕ್ಖಾಣಂ[೪]ಗೊಂಡರಾ ಕಾಲದಿಂ ತೊಟ್ಟಾಹಾರದೊಳಪ್ಪ ದೋಷದಿಂದಂ 'ಕಚ್ಛುಜರಖಾಸಸೋಸೋ ಭತ್ತಚ್ಛದಿ ಅಚ್ಛಿಕುಚ್ಛಿದುಕ್ಖಾಣಿ' ಎಂದಿವು ಮೊದಲಾಗೊಡೆಯವೇೞುನೂಱು ಬ್ಯಾಧಿಗಳಂ ನೂಱು ವರುಷಂಬರಂ ಒಳ್ಳಿತ್ತಾಗಿ ಸೈರಿಸಿ ಉಗ್ರೋಗ್ರ ತಪದಿಂ ದೀಪ್ತತಪಂ ಮಹಾತಪಂ ಘೋರತಪಮೆಂದಿವು ಮೊದಲಾಗೊಡೆಯ ತಪಂಗಳಂ ಗೆಯ್ಯೆ ತಪದ ಮಾಹಾತ್ಮ್ಯದಿಂದಂ ಆಮೋಷಧಿ ಖೇಳೋಷಧಿ ಜಲ್ಲೋಷಧಿ ವಿಪ್ರೋಷಧಿ ಸರ್ವೋಷಧಿಯೆಂದಿವು ಮೊದಲಾಗೊಡೆಯ ಋದ್ಧಿಗಳ್ ಪುಟ್ಟಿದೊ[೫]ಡಂ[೫] ವ್ಯಾಧಿಗೆ ತಕ್ಕ ಪ್ರತೀಕಾರಮಂ ಮಾಡದಿಂತು ಘೋರವೀರ ತಪಶ್ಚರಣಂ ಗೆಯ್ಯೆ

ಮತ್ತೊಂದು ದಿವಸಂ ಸೌಧರ್ಮೇಂದ್ರಂ ತನ್ನ[೬]ಸಭೆಯೊಳ್[೬] ಸಿಂಹಾಸನ ಮಸ್ತಕಸ್ಥಿತನಾಗಿ ಧರ್ಮಶ್ರವಣಾನಂತರಂ ರಿಸಿಯರ್ಕಳ ಗುಣಂಗಳಂ ವ್ಯಾವರ್ಣಿಸುತ್ತಿರ್ದು ಸನತ್ಕುಮಾರ ರಿಸಿಯ ಗುಣಗಣಮನಾದಮಾನುಂ ಕೈಕೊಂಡಿಂತೆಂದು ಪೇೞಲ್ ತಗುಳ್ದೊನ್ ವಾತ ಪಿತ್ತ ಶ್ಲೇಷ್ಮ ಶ್ವಾಸ ಖಾಸ ಜರಾರು[೭]ಚಿ ಛರ್ದ್ಯತಿ[೭]ಸಾರಾಕ್ಷಿ ಕುಕ್ಷಿ ವೇದನಾಸ್ಫೋಟಕಂ ಪಿಟಕಂ ಶೂಲ ಭಗಂದರಂ ಕುಷ್ಠ ಕ್ಷಯ ಗಂಡ[೮] ಶಿರೋವೇದನೆ ಮೊದಲಾಗೊಡೆಯವೇೞುನೂಱು ವ್ಯಾಧಿಗಳೊರ್ಮೊದಲೆ ಮೆಯ್ಯೊಳ್ ಪುಟ್ಟಿದೊಡಂತು ತಾಮುಂ ಋದ್ಧಿಸಂಪನ್ನರಾಗಿಯುಂ ವ್ಯಾಧಿಗೆ ತಕ್ಕ ಪ್ರತೀಕಾರಂ ಗೆಯ್ಯದೆ ನೂಱು ವರುಷಂಬರೆಗಂ ಒಳ್ಳಿತ್ತಾಗಿ ಸೈರಿಸಿ ತಪಂಗೆಯ್ವಪ್ಪರೆಂದು ಸೌಧರ್ಮೇಂದ್ರಂ ಪೊಗೞ್ದೊಡೆ ಕೇಳ್ದು ಮುನ್ನೆ ಬಂದ ದೇವರ್ಕಳಿರ್ವರುಂ ವೈದ್ಯರ ರೂಪಿನೊಳ್ ಮರ್ದುಗಳಂ ಪಸುಂಬೆಯೊಳ್ ತೆಕ್ಕನೆ ತೀವಿ ಪರೀಕ್ಷಿಸಲ್ಕೆಂದು ಸಾರೆವಂದು ವಂದಿಸಿ ಇಂತೆಂದರ್ ಭಟಾರಾ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮಂ ಮರ್ದಂ ಮಾಡಿ ಕಿಡಿಸಲ್ ನೆಱೆವೆ[೯]ವು[೯] ಮರ್ದಂ ಮಾ[೧೦]ಡು[೧೦]ವುದನೊಡಂಬ[೧೧]ಡವೇೞ್ಕುಮೆಂದೊಡೆ[೧೧] ಭಟ್ಟಾರರುಂ ಮೋನಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ ಪಿರಿದುಂ ಬೇಗಮಿ[೧೨]ರ್ದೆ[೧೨]ೞ್ದು ಪೋಗಿ ಮಱುದಿವಸಂ ಮಗುೞ್ದು ಬಂದಿಂತೆಂದರ್ ಭಟಾರಾ ವೈದ್ಯಶಾಸ್ತ್ರದೊಳಾ[೧೩]ದಮಾನುಂ[೧೩] ಕುಶಲರೆ[೧೪]ಮುಂ[೧೪] ಗ್ರಂಥಾರ್ಥ[೧೫]ಸ್ವರೂಪದಿಂದೆಲ್ಲಾ ಕುಶಲರೆಮುಂ[೧೫] ಕರ್ಮಜ್ಞರೆಮುಂ ಮರ್ದುಗಳುಮಭಿನವಂಗಳಾದಮೊಳ್ಳಿದವಿರ್ದುವುಂ ನಿಮ್ಮ ಮೆಯ್ಯ ಕುತ್ತಂಗಳೆಲ್ಲಮನೇೞು ದಿವಸದಿಂ

೧. ರ್ ವೆರಸು ಅರಸಿಯರ್ ಬೆರಸಿ (ಕ, ಗ), ರ್ ವೆರಸು ಅರಸಿಯರುಂವೆರಸಿ (ಖ), (ಘ, ಚ) ಗಳಲ್ಲಿಲ್ಲ. ೨. ಳ್ದಿ (ಕ, ಖ, ಗ), ದ್ದಿ (ಚ, ಛ). ೩. ಮಾವರೆಯೆಣ್ಣೆ (ಕ, ಗ). ೪. ಪ್ರತ್ಯಾಖ್ಯಾನಂ (ಘ, ಚ). ೫. ಡವಂ (ಕ, ಖ, ಗ) ೬. ಪರಿವಾರಂಬೆರಸು (ಘ, ಚ, ಛ). ೭. ಜೆರಾದ್ಯೋ (ಕ, ಖ, ಗ). ೮. +ಮಾಲಾ (ಘ, ಚ). ೯. ಮುಂ (ಕ, ಖ, ಗ). ೧೦. ಡಿ ಕೆಡಿಸು (ಛ). ೧೧. ಡುವಿರಪ್ಪೊಡೆನೆ (ಚ, ಛ). ೧೨. ಳ್ದೆ (ಕ, ಖ, ಗ). ೧೩. ದಂ (ಘ, ಚ, ಛ). ೧೪. ವು (ಘ, ಚ, ಛ). ೧೫. ಪ್ರಯೋಗಂಗಳೆಲ್ಲಮೆಮಗೆ ಪಾಠಂ (ಘ, ಚ, ಛ).

ದೊಳಗೆ ಕಿಡಿಸಿ ನೀರೋಗಮಪ್ಪಂತಿರೆ ಮಾಡುವೆವು ಬಱಿಕ್ಕೇನುಂ ಸಂಕ್ಲೇಶಮಿಲ್ಲದೆ ತಪಂಗೆಯ್ಯಿಮೆಂದೊಡೆ ಭಟಾರರವರೊಡನೆ ನುಡಿವಾಗಳುಗು[೧]ಟಿ ಸೀ[೧]ಕರಂಗಳ್ ತಮ್ಮ ಮುಂಗೆಯ್ಯ ಮೇಗೆ ಬಿಟ್ಟೊಡೆ ಬೆರಲಿಂ [೨]ಸೀಂಟಿ[೨] ತೋಱಿದಾಯೆಡೆ ಸುವರ್ಣಾಯಮಾನಮಾಗಿ ತೊಳಗುತ್ತಿರ್ದ ಮೆಯ್ಯ ತೇಜಮುಮಂ ದೇವರ್ಕ್ಕಳ್ ವಿಸ್ಮಯಂಬಟ್ಟು ನೋಡುತ್ತಿರೆ ಭಟಾರರಿಂತೆಂದರೆಮಗೆ ಮರ್ದು ಬಾೞ್ತೆಯಪ್ಪೊಡೆಮಗಾವೆ ಮರ್ದಂ ಬಲ್ಲೆ[೩]ಮೆ[೩]ಮಗದು ಬಾೞ್ತೆಯಲ್ತು ನೀಮುಂ ಜಾತಿಜರಾಮರಣಂಗಳೆಂಬೆಮ್ಮ ಕುತ್ತಮಂ ಕಿಡಿಸಲಾರ್ಪೊಡಾ ಮರ್ದನೊಡಂಬಡುವೆಮುೞಿದಾವ ಮರ್ದುಮನೊಡಂಬಡುವೆ[೪]ಮಲ್ಲೆಮೆಂ[೪]ದೊಡೆ ದೇವರ್ಕಳುಮಿಂತೆಂದರ್ ಜಾತಿಜರಾಮರಣಂಗಳೆಂಬ ಕುತ್ತಮಂ ಕಿಡಿಸಲ್ಕಾಮಾಱ[೫]ಮಾ ಕುತ್ತಮಂ ಕಿಡಿಸಲ್ಕೆ ಭಟಾರಾ ನೀಮೆ ಸಮ[೫]ರ್ಥರಿರ್ ಪರಮ[೬]ವೈದ್ಯರಿರದರ್ಕ್ಕೆಂದು ಮತ್ತಂ ದೇವರ್ಕಳೆಂದರ್ ಭಟಾರಾ ಸೌಧರ್ಮೇಂದ್ರಂ ನಿಮ್ಮ ತಪದೊಳಪ್ಪ ಗುಣಂಗ[೬][ಳುಮಂ][೬] ವ್ಯಾಧಿಗಳಂ ಸೈರಿಸಿ ನೆಗೞ್ವ ನೆಗೞ್ತೆಯುಮಂ ದೇವರ್ಕಳ ಸಭೆಯ ನಡುವೆಯಾದಮಾನುಂ ಕೈಕೊಂಡು ಪೊಗೞ್ದೊಡಾಮಿಂದ್ರನ ಮಾತಂ ನಂಬದೆ ನಿಮ್ಮಂ ಪರೀಕ್ಷಿಸಲ್ಕೆಂದು ಬಂದೆ[೭]ವು[೭] ಸೌಧರ್ಮೇಂದ್ರನ ಪೊಗೞ್ದುದೇನುಂ ತಪ್ಪಿಲ್ಲೆಂದು ನುಡಿದು ಗುಣಂಗೊಂಡು ಮಗುೞ್ದು ವಂದಿಸಿ ಮರ್ದುಗಳೆಲ್ಲಮನೊಂದು ಪೞವಾವಿಯೊಳ್ ಪೊಯ್ದು ದೇವರ್ಕಳ್ ತಮ್ಮ ದೇವಲೋಕಕ್ಕೆ ವೋದೊರಾ ಮರ್ದಿನ ಬಾವಿಯ ನೀರಂ ಮಿಂದೊರ್ಗ್ಗೆಲ್ಲಂ ಕುತ್ತಂಗಳ್ ಕೆ[೮]ಡುವುವಾದವು[೮]

ಸನತ್ಕುಮಾರ ಭಟಾರರುಮೇೞುನೂಱುಂ ವ್ಯಾಧಿಗಳಂ [೯]ನೂಱುವರುಷಂ ಬರೆಗಂ[೯] ಸೈರಿಸಿ [೧೦]ಘೋರವೀರತಪಶ್ಚರಣಂಗೆಯ್ದು ಆಲದ ಮರದ ಕೆೞಗೆ ಸಂನ್ಯಸನಂಗೆಯ್ದು ಸಮಾಧಿಮರಣದಿಂ ಮುಡಿಪಿ ಮಿಕ್ಕ ರತ್ನತ್ರಯಂಗಳಂ ಸಾಧಿಸಿ[೧೦] ಸನತ್ಕುಮಾರಕಲ್ಪದೊಳ್ ಏೞು ಸಾಗರೋಪಮಾಯುಷ್ಯಸ್ಥಿತಿಯನೊಡೆಯೊನಿಂದ್ರನಾಗಿ ಪುಟ್ಟಿದೊಂ

ಮತ್ತಾರಾಧಕರಪ್ಪ ಭವ್ಯರ್ಕಳೆಲ್ಲಂ ಸನತ್ಕುಮಾರ ಭಟಾರರಂ ಮನದೊಳ್ ಬಗೆದು ವ್ಯಾಧಿಗಳೊಳಪ್ಪ ವೇದನೆಗ[ಳುಮಂ] ಪಸಿವುಂ ನೀರೞ್ಕೆ ಮೊದಲಾಗೊಡೆಯ [೧೧] ಬಾಧೆಯುಮಂ ಸೈರಿಸಿ [೧೨]ದೇವರಂ ಧ್ಯಾನಿಸುತ್ತಂ ಪಂಚನಮಸ್ಕಾರಮಂ ಮನದೊಳುಚ್ಚರಿಸುತ್ತಂ [೧೩]ಮಿಕ್ಕ ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ[೧೩] ಸ್ವರ್ಗಾಪವರ್ಗಸುಖಂಗಳನೆಯ್ದುಗೆ

೧. ಡಳಸಿಖ (ಖ). ೨. ತೊಡೆದು (ಘ, ಚ, ಛ). ೩. ವೆ (ಛ). ೪. ವಲ್ಲೆವೆಂ (ಘ). ೫. ರುಂ ಖಿಪ್ರ್ಸರಮ (ಕ). ೬. ಳ್ಮಂ (ಸ). ೭. ವುಂ (ಸ–ಛ). ೮. ಟ್ಟುಪೋಪವಾ (ಚ), ಟ್ಟುವಾ (ಛ). ೯. (ಘ, ಚ, ಛ) ಗಳಲ್ಲಿಲ್ಲ. ೧೦. (ಘ, ಚ, ಛ) ಗಳಲ್ಲಿಲ್ಲ. ೧೧. + ಪರೀಷಹಂಗಳೊಳಾದ (ಘ, ಚ, ಛ). ೧೨. ಸಮ್ಯಗ್ದರ್ಶನಜ್ಞಾನ ಚಾರಿತ್ರಂಗಳಂ ಸಾದಿಸಿ (ಘ, ಚ, ಛ). ೧೩. ಮುಡಿಪಿ (ಘ, ಚ, ಛ).

## (೫) ಅಣ್ಣಿಕಾಪುತ್ರನ ಕಥೆ

**ಅಣ್ಣಿಕಾಪುತ್ರನ ಕಥೆಯಂ ಪೇೞ್ವೆಂ:**

**ಗಾಹೆ ॥** ಣಾವಾಏ ಣಿಬ್ಬುಡಾಏ ಗಂಗಾಮಜ್ಝೇ ಅಮೂಢಮಾಣಮದೀ ।
ಆರಾಧಣಂ ಪವಣ್ಣೋ ಕಾಲಗದೋ [೧][ಏಣಿಯಾ][೧] ಪುತ್ತೋ ॥

[ಣಾವಾಏ–ನಾವೆ, ಣಿಬ್ಬುಡಾಏ–ಮುೞುಗಿದುದಾದೊಡೆ, ಗಂಗಾಮಜ್ಝೇ–ಗಂಗಾಮಹಾನದಿಯ ನಡುವೆ, ಅಮೂಢಮಾಣಮದೀ–ಮೋಹಿಸದ ಬುದ್ಧಿಯನೊಡೆಯನಾಗಿ, ಆರಾಧಣಂ–[೨]ನಿಜಾತ್ಮಾರಾಧನೆಯಂ,[೨] ಪವಣ್ಣೋ–ಲೇಸಾಗಿ ಪೊರ್ದಿದೊಂ, ಕಾಲಗದೊ–ಕಾಲಂಗೆಯ್ದೊನಾಗಿ, [೧][ಏಣಿಯಾ][೧]ಪುತ್ತೊ–ಅಣ್ಣಿಕೆಯ ಮಗಂ]

ಅದೆಂತೆಂದೊಡೆ:

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಉತ್ತರಮಧುರೆಯೆಂಬುದು ಪೊೞಲದನಾಳ್ವೊಂ ಪ್ರಜಾಪಾಳನೆಂಬೊನರಸನಾತನ ಮಹಾದೇವಿ ಸುಪ್ರಭೆಯೆಂಬೊಳಂತವರ್ಗ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಪೊೞಲೊಳ್ ಸಾರ್ಥಾಧಿಪತಿ ಧನದತ್ತನೆಂಬೊಂ ಪರದಂ ಧನಕನಕಸಮೃದ್ಧನಾತನ ಭಾರ್ಯೆ ಧನಶ್ರೀಯೆಂಬೊಳಾಯಿರ್ವರ್ಗಂ ಮಗಂ ಧನದೇವನೆಂಬೊನಂತವರ್ಗಳ್ಗೆ ಸುಖದಿಂ ಕಾಲಂ ಸಲೆ

ಮತ್ತೊಂದು ದಿವಸಂ ಧನದೇವಂ ಪರದಿಂಗೆಂದು ಪಿರಿದುಂ ಸಾರ[೩]ಮಪ್ಪ ಭಂಡಮಂ ತೀವಿಕೊಂಡು ಪಿರಿದುಂ ಸಾರ್ಥಂಬೆರಸು ದಕ್ಷಿಣ ಮಧುರೆಗೆ ವೋದೊಡಾ ಪೊೞಲ ರಾಜಶ್ರೇಷ್ಠಿ ತಿಳಕಶ್ರೇಷ್ಠಿಯೆಂಬೊನಾತನ ಭಾರ್ಯೆ ನಂದೆಯೆಂಬೊಳಾಯಿರ್ವರ್ಗಂ ಮಕ್ಕಳ್ ಪದ್ಮಾವತಿ[೪] ಸುಮತಿ ಗುಣಮತಿಯೆಂದಿವರ್ ಮೊದಲಾಗೊಡೆಯ ಎಣ್ಬರ್ ಪೆಣ್ಗೂಸುಗಳಾದೊ[೫]ಡ[೫]ವರೊಳಗೆಲ್ಲರಿಂ ಕಿಱಿಯಳಣ್ಣಿಕೆಯೆಂಬೊಳಾಕೆಯಂ ಧನದತ್ತನ ಮಗನಪ್ಪ ಧನದೇವನಂ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಗುಣಂಗಳಿಂ ಕೂಡಿದೊನಂ *ತಿಳಕಶ್ರೇಷ್ಠಿಯುಂ ನಂದೆಯುಂ ಕಂಡಾತಂಗೆ ಬಯಸಿ ಅಣ್ಣಿಕೆಯೆಂಬ ಕೂಸಂ ಕೊಟ್ಟೊಡೆ ಕೆಲವು ದಿವಸಮಾ ಪೊೞಲೊಳಿರ್ದ್ದು ತಮ್ಮ ಕೊಂಡು ಪೋದ ಭಂಡಮಂ ಮಾಱಿ ಪೆಱದಂ ತಮ್ಮ ನಾ[೬]ಟ್ಕ[೬]ಪೂರ್ವಮಪ್ಪ ಭಂಡಮಂ ತೀವಿಕೊಂಡು ತಮ್ಮ ಪೊೞಲ್ಗುತ್ತರ ಮಧುರೆಗೆ ಬಂದಿರ್ದ್ದರನ್ನೆಗಮಣ್ಣಿಕೆಗೆ ಗರ್ಭಮಾಗಿ ಮಗಂ ಪುಟ್ಟಿದೊಡೆ ಧನದೇವನ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದಣ್ಣಿಕೆಯ ಮಗನೆಂ[೭]ದಾತಂ[೭]ಗಣ್ಣಿಕಾಪುತ್ರನೆಂದು ಪೆಸರನಿ[೮]ಟ್ಟೊಡಾ[೮]ತಂ ಕ್ರಮಕ್ರಮದಿಂ ಸುಖದಿಂ [೯]ಬ[೯]ಳೆದು ನವಯೌವನನಾಗಿ[೧೦] ಪ್ಪರ್ನ್ನೆಗಂ

೧. ಅಣ್ಣಿಕಾ (ಸ). ೨. ದರ್ಶನಜ್ಞಾನ ಚಾರಿತ್ರಂಗಳಾರಾಧನೆಯಂ (ಘ, ಚ, ಛ). ೩. + ಧನ (ಘ, ಚ, ಛ). ೪. + ಪ್ರಭಾವತಿ (ಘ, ಚ, ಛ). ೫. ರ (ಘ, ಚ). *ಪು. ೬೬–೬೯* (ಖ)ದಲ್ಲಿ ನಷ್ಟವಾಗಿದೆ. ೬. ಳ್ಗಳ್ಗೆ ಅ (ಕ, ಗ). ೭. ದೊಡಾತಂ (ಘ, ಛ). ೮. ಟ್ಟರಾ (ಘ, ಚ, ಛ). ೯. ಬೆ (ಕ, ಗ, ಚ). ೧೦. +ಸುಖಮಿ (ಘ, ಚ, ಛ).

ಇತ್ತ [1]ದಮ[1]ಸೂರಿಗಳೆಂಬವರವಧಿಜ್ಞಾನಿಗಳಪ್ಪ ಆಚಾರ್ಯರ್ ಪಿರಿದುಂ ರಿಸಿ ಸಮುದಾಯಂಬೆರಸು ಗ್ರಾಮನಗರಖೇಡಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರುತ್ತರ ಮಧುರೆಗೆ ಬಂದು ಬಹಿರುದ್ಯಾನವನದೊಳಿರ್ದ್ದರನಣ್ಣಿಕಾಪುತ್ರಂ ಪೋಗಿ [2] ವಂದಿಸಿ ಧರ್ಮಮಂ ಕೇಳ್ದು ಸಮ್ಯಕ್ತ್ವಪೂರ್ವಕಂ ಶ್ರಾವಕವ್ರತಂಗಳೆಲ್ಲಮಂ ಕೈಕೊಂಡು ತದನಂತರಮೆ ಭಟಾರಾ ಎನಗಾಯುಷ್ಯವೆನಿ[3]ತೆಂದು[3] ತನ್ನಾಯುಷ್ಯ ಪ್ರಮಾಣಮಂ ಬೆಸಗೊಂಡೊಡೆ ಭಟಾರರುಂ ಕಿಱಿದೆ ನಿನಗಾಯುಷ್ಯಮೆಂದು ಪೇೞ್ದೊಡೆ ವೈರಾಗ್ಯಪರಾಯಣನಾಗಿ ತಾಯುಂ ತಂದೆಯುಮಂ ನಂಟರುಮಂ ಬಿಡಿಸಿ ನಿಶ್ಶಲ್ಯಂಗೆಯ್ದು [1]ದಮ[1]ಸೂರಿಗಳೆಂಬಾಚಾರ್ಯರ ಪಕ್ಕದೆ ತಪಂಬಟ್ಟು ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳನೊಡಂಬಡಿಸಿ ಏಕವಿಹಾರಿಯಾಗಿ ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ [4]ಗ್ರಾಮನಗರಖೇಡಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ[4] ತೀರ್ಥಂಗಳೆಲ್ಲಮಂ ವಂದಿಸಲ್ಕೆಂದು ಗಂಗಾಮಹಾನದಿಯಂ ಪಾಯ್ದು ಪೋಪ ಬಗೆಯಿಂದಂ ನಾವೆಯನೇಱಿದೊಡದೊಂದುತ್ಪಾತ ವಾತದಿಂದಂ [5]ಗಂಗಾಮಹಾನದಿಯ[5] ನಡುವೆ ಮಡುವಿನೊಳ್ ಭಯಂಕರಮಾಗುತ್ತಿರ್ದ್ದ ತೆರೆ[6]ಯ[6]ನೊಡೆಯದಱೊಳ್[7] ಮುೞುಗಿದೊಡಾ ಅಣ್ಣಿಕಾಪುತ್ರನೆಂಬ ರಿಸಿ ಪಿರಿದಪ್ಪ ಮಾಹಾತ್ಮ್ಯಮಂ ಮೋಹಿಸದ ಬುದ್ಧಿಯನೊಡೆಯೊಂ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಯಾವಜ್ಜೀವಂ ನಿವೃತ್ತಿಗೆಯ್ದು [8]ಕಾಯೋ[8]ತ್ಸರ್ಗಂ ನಿಂದು [9]ಧರ್ಮಧ್ಯಾನ[9] ಶುಕ್ಲಧ್ಯಾನಂ[10]ಗಳಂ[10] ಜಾನಿಸಿ ಸಕಳ ಕರ್ಮಂಗಳಂ ಕಿಡಿಸಿ [11]ಅಂತರ್ಗತ[11] ಕೇವಲಿಯಾಗಿ ಮೋಕ್ಷಕ್ಕೆ ಪೋದರ್

ಮತ್ತಂ ಪೆಱರಾರಾಧಕರಪ್ಪವರ್ಗಳೆಲ್ಲಮಣ್ಣಿಕಾಪುತ್ರನೆಂಬ ರಿಸಿಯಂ ಮನದೊ[12]ಳಿಟ್ಟು [ಅ][12]ಚೇತನೋಪಸರ್ಗಂ ಮೊದಲಾಗೊಡೆಯ ಉಪಸರ್ಗಂಗಳುಮಂ [13]ನೀರಟ್ಕೆ ಮೊದಲಾಗೊಡೆಯ ಪರೀಷಹಂಗಳುಮಂ ಸೈರಿಸಿ[14] ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗದ ಸುಖಂಗ[15]ಳಂ ಭವ್ಯರ್ಕಳೆ[15]ಯ್ದುಗೆ

---

೧. ದಮುದರ (ಘ), ದಮುವರ (ಚ), ಯಮುಧರ (ಛ). ೨. +ಕಂಡು (ಛ). ೩. ತುಂಟೆಂದು (ಘ, ಚ). ೪. (ಘ, ಚ, ಛ) ಗಳಲ್ಲಿಲ್ಲ. ೫. (ಘ, ಚ, ಛ) ಗಳಲ್ಲಿಲ್ಲ. ೬. ಗಳ (ಘ, ಚ, ಛ). ೭. + ನಾವೆ (ಘ, ಛ). ೮. ಉ (ಕ, ಗ). ೯. ಸಮ್ಯಗ್ದರ್ಶನ ಜ್ಞಾನ ಚಾರಿತ್ರಂ ಗಳಂ ಸಾಧಿಸಿ (ಘ, ಚ, ಛ). ೧೦. ಮಂ (ಚ). ೧೧. ಅನಂತರಂ (ಘ, ಚ, ಛ). ೧೨. ಳ್ ಬಗೆದ (ಘ, ಚ, ಛ). ೧೩. + ಪಸಿವುಂ (ಘ, ಚ, ಛ). ೧೪. + ಸಮ್ಯಕ್ (ಘ, ಚ, ಛ). ೧೫. ಳನೆ (ಚ).

## (೬) ಭದ್ರಬಾಹು ಭಟ್ಟಾರರ ಕಥೆ

ಭದ್ರಬಾಹು ಭಟ್ಟಾರರ ಕಥೆಯಂ ಪೇೞ್ವೆಂ :

**ಗಾಹೆ ||** ಓಮೋದರಿಏ ಘೋರಾಏ ಭದ್ದಬಾಹೂ ಅಸಂಕಿಲಿಟ್ಠಮದೀ |
ಘೋರಾಏ ತಿಗಿಂಚ್ಛಾಏ ಪಡಿವಣ್ಣೋ ಉತ್ತಮಂ ಅಟ್ಠಂ ||

[ಓಮೋದರಿಏ–ಅರೆ ಉಣಿಸಿನಿಂದಂ, ಘೋರಾಏ–ಆದಮಾನುಂ ಕಡಿದಪ್ಪುದಱಿಂದಂ, ಭದ್ದಬಾಹೂ–ಭದ್ರಬಾಹು ಭಟ್ಟಾರರ್, ಅಸಂಕಿಲಿಟ್ಠಮದೀ–ಸಂಕ್ಲೇಶ [೧]ಪರಿಣಾಮಮಿಲ್ಲದೊನಾಗಿ,[೧] ಘೋರಾಏ–ಕಡಿದಪ್ಪ, ತಿಗಿಂಚ್ಛಾಏ–ಪಸಿವಿನಿಂದಂ,* ಪಡಿವಣ್ಣೋ–ಪೊ[೨]ರ್ದಿ[೨]ದೊಂ, ಉತ್ತಮಂ ಅಟ್ಠಂ–ಮಿಕ್ಕ ದರ್ಶನಜ್ಞಾನಚಾರಿತ್ರಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [೩]ಪುರವರ್ಧನಮೆಂಬುದು ನಾಡಲ್ಲಿ[೩] [೪]ಕೌಂಡಿನೀ[೪] ನಗರಮೆಂಬುದು ಪೊೞಲದನಾಳ್ವೊಂ ಪದ್ಮರಥನೆಂಬೊನರಸನಾತನ ಮಹಾದೇವಿ ಪದ್ಮಶ್ರೀಯೆಂಬೊಳಂತವರ್ಗಳಿಷ್ಟವಿಷಯಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಅರಸನ [೫]ಪುರೋಹಿತಂ[೫] [೬]ನಾಲ್ಕು ವೇದಮುಮಾಱಂಗಮುಂ[೬] ಪದಿನೆಂಟು ಧರ್ಮಶಾಸ್ತ್ರಂಗಳುಮಂ ಬಲ್ಲೊಂ ಸೋಮಶರ್ಮನೆಂಬೊಂ ಪಾರ್ವನಾತನ ಭಾರ್ಯೆ ಪ್ರತ್ಯಕ್ಷ ಶ್ರೀಯಾದೇವತೆಯನೆ ಪೋಲ್ವ ಸೋಮಶ್ರೀಯೆಂಬೊಳಾಯಿರ್ವರ್ಗ್ಗಂ ಮಗಂ ಪುಟ್ಟಿದೊಂ ತಾಯ್ಗಂ ತಂದೆಗಮೆಲ್ಲಾನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದಱಿಂದಮಾ ಕೂಸಿಂಗೆ ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆದಿಟ್ಟೊಡಾತನುಂ ಬಿದಿಗೆಯ ಚಂದ್ರನಂತೆ ಕ್ರಮಕ್ರಮದಿಂ ಸುಖದಿಂ ಬೆಳೆದು ಮುಂಜಿಗಟ್ಟುವ ಪ್ರಾಯಮಾದೊಡೆ ಪ್ರಶಸ್ತ ದಿವಸ ವಾರ ನಕ್ಷತ್ರ ಮುಹೂರ್ತದೊಳ್ [೭]ಮುಂಜಿಬಂಧನ ಕ್ರಿಯೆಯಂ[೭] ಮಾಡಿದ ಬೞಿಕ್ಕೆ ತನ್ನೋರಗೆಗಳಪ್ಪ ಪಲಂಬರ್ [೮]ಮಾಣಿಗಳ್[೮] ವೆರಸು ಪೊಱವೊೞಲೊಳ್ ಬಟ್ಟಾಡುತ್ತಿರೆ ಭದ್ರಬಾಹು[೯]ವೆಂಬ ಮಾಣಿ[೯]ಯೊಂದು ಬಟ್ಟಿನ ಮೇಗೆ ಪದಿನಾಲ್ಕು ಬಟ್ಟನೊಂದೊಂದಱ ಮೇಗೋಳಿಯೊಳಿಟ್ಟಾಡುತ್ತಿರ್ಪನ್ನೆಗಂ

ಇತ್ತ ವರ್ಧಮಾನಭಟ್ಟಾರರ್ ಮೋಕ್ಷಕ್ಕೆ ವೋದಿಂಬೞಿಕ್ಕೆ ಚತುರ್ದಶಪೂರ್ವಧಾರಿಗಳಪ್ಪ ಶ್ರುತಕೇವಳಿಗಳ್ ನಾಲ್ಕನೆಯವರ್ ಗೋವರ್ಧನರೆಂಬ ಭಟಾರರುಜ್ಜಯಂತ[೧೦]ಮಂ[೧೦] ವಂದಿಸಲೆಂದು ವಿಹಾರಿಸುತ್ತಂ ಬರ್ಪೊರಾ [೧೧]ಕೌಂಡಿನೀ[೧೧] ನಗರಕ್ಕೆ ವಂದು ಪೊಱವೊೞಲೊಳೊಂದು ಬಟ್ಟಿನಮೇಗೆ ಪದಿನಾಲ್ಕುಂ ಬಟ್ಟ

---

೧. ಮಿಲ್ಲದ ಪರಿಣಾಮಮನೊಡೆಯನಾಗಿ (ಘ, ಚ, ಛ). * + ಅಪಿ–ಮತ್ತೆ (ಸ). ೨. ಳ್ದಿ (ಕ, ಖ, ಗ). ೩. (ಘ, ಚ, ಛ) ಗಳಲ್ಲಿಲ್ಲ. ೪. ಕಾಳಿಂಗ (ಘ, ಛ), ಕಳಿಂಗ (ಚ). ೫. ಪಾರ್ವಂ (ಘ, ಚ, ಛ). ೬. (ಘ, ಚ, ಛ) ಗಳಲ್ಲಿಲ್ಲ. ೭. ಮುಂಜಿಗಬದ್ಧನ ಕ್ರಿಯೆಗಳಂ (ಕ, ಗ). ೮. ಮಕ್ಕ (ಗ), + ಬ್ರಹ್ಮಚಾರಿಗಳಪ್ಪ (ಘ, ಚ, ಛ). ೯. (ಘ, ಚ, ಛ) ಗಳಲ್ಲಿಲ್ಲ. ೧೦. ಗಿರಿಯಂ (ಛ). ೧೧. ಕಳಿಂಗ (ಘ, ಚ, ಛ).

[೧]ನೊಂದೊಂದಱಮೇಗೋಳಿಯೊಳಿಟ್ಟಾ[೧]ಡುತ್ತಿರ್ಪ ಭದ್ರಬಾಹುಮಾಣಿಯಂ ಗೋವರ್ಧನ ಭಟ್ಟಾರರ್ ಪಿರಿದುಂ ಬೇಗಂ ನೋಡುತ್ತಿರ್ದಿಂತೆಂದು[೨]ದ್ದೇ[೨]ಶಂ ಗೆಯ್ದೊರೀತನೆಮ್ಮಿಂಬೞಿಕ್ಕೆ ಚತುರ್ದಶಪೂರ್ವಧಾರಿಯ[೩]ಪ್ಪ ಮಾಹಾತ್ಮ್ಯಮನೊಡೆಯೊಂ ಭದ್ರಬಾಹು ಭಟಾರರೆಂಬೊರಪ್ಪೊರೆಂದು ಬಗೆದಾತನವರ ಮನೆಗೊಡಗೊಂಡು ಪೋಗಿಯವರ ತಾಯ್ತುಂದೆಗಮಿಂತೆಂದರೀತನನೆಮಗೊಪ್ಪಿಸಿಮೆಲ್ಲಾ ಶಾಸ್ತ್ರಂಗ[೪]ಳುಮಂ[೪] [೫]ಕಲ್ಪಿಸಿ[೫] ಪಂಡಿತನಂ ಮಾಡಿ ನಿಮಗೊಪ್ಪಿಸುವೊಮೆಂದೊಡವರುಮಂತೆ*ಗೆಯ್ಯಿಮೆಂದೊಡಾತನನೊಡಗೊಂಡು ಪೋಗಿ ಕೆಲವು ದಿವಸದಿಂದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರ ನಿಘಂಟು ಕಾವ್ಯ ನಾಟಕಂ ಮೊದಲಾಗೊಡೆಯ ಲೋಕದೊಳುಳ್ಳ ಶಾಸ್ತ್ರಂಗಳೆಲ್ಲ[೬]ಮಂ ಕಲ್ಪಿಸಿ[೬]ದೊಡಧಿಗಮ ಸಮ್ಯಗ್‌ದೃಷ್ಟಿಯಾಗಿಯಾಗಮದೊಳೆಲ್ಲಮನಱಿದು ಸಂಸಾರ ಶರೀರ ಭೋಗ ವೈರಾಗ್ಯ ಪರಾಯಣನಾಗಿ ಭಟ್ಟಾರಾ ಎನಗೆ ದೀಕ್ಷೆಯಂ ದಯೆಗೆಯ್ಯಿಮೆನೆ ಭಟಾರರೆಂದರೆಮಗಂತು ದೀಕ್ಷೆಯಂ ಕುಡಲಾಗ ಮಗನೆ ನಿನ್ನ ಪೊೞಲ್ಗೆ ನೀಂ ಪೋಗಿ ನಿನ್ನ ಕಲ್ತ ವಿದ್ಯೆಯಂ ಪಂಡಿತ[೭]ಕ್ಕೆ[೭]ಯುಮನಾ ಪೊೞಲೊಳ್ ನೆಗೞ್ಚಿ ನೆಗೞ್ದ ಪಂಡಿತರ್ಕಳೊಡನೆ ವಾದಂಗೆಯ್ದವರಂ ಗೆಲ್ದು ದಶದಿಶೆಗಳೊಳೆಲ್ಲಂ ನಿನ್ನ ಪಾಂಡಿತ್ಯದ ಯಶಮಂ ಪ[೮]ಸರಿ[೮]ಸಿ ನಿನ್ನನಾವೊಡಗೊಂಡು ಬಂದುದರ್ಕೆ ತಾಯ್ತುಂದೆಗಂ ಸಂತೋಸಂಮಾಡಿಯವರಂ ಬಿಡಿಸಿಯೊಡಂಬಡಿಸಿ ಬಂದೊಡೆ ತ[೯]ಪಮಂ ಕು[೯]ಡಲಕ್ಕುಮಂತೆಯಾಗದೆಂದೊಡೆ ಭದ್ರಬಾಹು[೧೦]ಮಾಣಿಯುಂ[೧೦] ಭಟ್ಟಾರರಂ ವಂದಿಸಿ ತನ್ನ ಪೊೞಲ್ಗೆ ವೋಗಿ ತಾಯುಂ ತಂದೆಯುಮಂ ಕಂಡು ಪೊೞಲೊಳ್ ನೆಗೞ್ದ ಪಂಡಿತರ್ಕಳೊಡನೆ ವಾದಂಗೆಯ್ದು ಗೆಲ್ದು ದಶದಿಶೆಗಳೊಳೆಲ್ಲಂ ತನ್ನ ಪಾಂಡಿತ್ಯದ ಯಶಮಂ ಪಸರಿಸಿ ತಾಯ್ತುಂದೆಗಂ ಸಂತೋಸಂ ಮಾಡಿಯವರನೊಡಂಬಡಿಸಿ ಬಂದು ಗೋವರ್ಧನ ಭಟ್ಟಾರರ ಪಕ್ಕದೆ ಕುಮಾರ ಬ್ರಹ್ಮಚಾರಿಯಾಗಿ ಭದ್ರಬಾಹು ತಪಂಬಟ್ಟು ಕೆಲವು ದಿವಸದಿಂದೊಳಗೆ ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಗ್ರಂಥಾರ್ಥ ಸ್ವರೂಪದಿಂ ಕಲ್ತು ಸಕಲ ಶಾಸ್ತ್ರ ಪಾರಾವಾರಗನಾಗಿ ಎಲ್ಲಾವೋದುಗಳುಮಂ ನೆಱೆಯೋದಿ ಕಲ್ತು[೧೧] ಶ್ರುತದೊಳಪ್ಪ ಭಕ್ತಿ ಕಾರಣಮಾಗಿ ಪ್ರತಿಮಾಯೋಗಂ ನಿಂದೊರಂ, ದೇವರ್ಕಳುಂ ಮನುಷ್ಯರ್ಕಳುಂ ಬಂದು ಪಿರಿದಪ್ಪ ಪೂಜೆಯಂ ಮಾಡಿಯರ್ಚಿಸಿ [೧೨]ಪೂಜಿಸಿ ಬಂದಿಸಿದೊಡೆ[೧೨]ಲ್ಲಾ ಋಷಿಸಮುದಾಯಮುಮಂ ಪ್ರತಿಪಾಲಿಸಲ್ಕೆ ಸಮರ್ಥರಾಗಿರ್ಪನ್ನೆಗಂ ಗೋವರ್ಧನ ಭಟ್ಟಾರರ್ ಸಮಾಧಿ ಮರಣದಿಂದಂ ರತ್ನತ್ರಯಮಂ ಸಾಧಿಸಿ ಮುಡಿಪಿ ದೇವಲೋಕಕ್ಕೆ ವೋದರ್

ಇತ್ತ ಭದ್ರಬಾಹು ಭಟ್ಟಾರರ್ ಚತುರ್ದಶಪೂರ್ವಧಾರಿಗಳುಂ[೧೩]ಕಡೆ[ಯಾ]ರಿಸಿ[೧೩]ಯಯ್ದನೆಯ ಶ್ರುತಕೇವಳಿಗಳವಧಿಜ್ಞಾನಿಗಳುಂ ಪಲವುಂ ಋದ್ಧಿಗಳಿಂ ಕೂಡಿ

೧. ನೋಳಿಯೋಳಿ (ಘ, ಚ, ಛ). ೨. ಪದೇ (ಗ). ೩. + ಯ್ದನೆಯ ಶ್ರುತಕೇವಳಿಯವಧಿಜ್ಞಾನಿ ಪಲವು ರುದ್ಧಿಗಳಿಂದಂ ಕೂಡಿದೊಂ ದೇವರಿಂದಂ ಮನುಷ್ಯರಿಂದಂ ಅರ್ಚಿಸೆ ಪೂಜಿಸೆ ಪಡುವೊಂ ಪಿರಿದ (ಘ, ಚ, ಛ). ೪. ಳ್ಮಂ (ಘ, ಚ, ಛ). ೫. ನೋದಿಸಿ (ಘ, ಚ, ಛ). ೬. ಮನೋದಿಸಿ (ಘ, ಚ, ಛ). ೭ ರ್ಕೆ (ಕ, ಗ). ೮. ರಪಿ (ಘ, ಚ, ಛ). ೯. ಪಂಗು (ಘ, ಚ, ಛ). ೧೦. ಭಟ್ಟಸುಂ (ಚ, ಛ). ೧೧. + ಬಳಿಕನವರತ ಸ್ಥಿತಿಯಿಂ (ಘ, ಚ, ಛ). ೧೨. ದರಿಂತೆ (ಘ, ಚ, ಛ). ೧೩. ಕಂಡು ಘೂರುಷಿನ (ಖ), ಕಡೆ (ಘ,ಚ,ಛ), ಕಡಮಾರಿಸಿ (ಕ,ಗ). *ಪು. ೬೬–೬೯* (ಖ)ದಲ್ಲಿ ನಷ್ಟವಾಗಿದೆ.

ದೊರೆಲ್ಲಾ ಋಷಿಸಮುದಾಯಮುಮಂ ಪ್ರತಿಪಾಳಿಸುತ್ತಂ ಗ್ರಾಮನಗರಖೇಡ ಖರ್ವಡಮಡಂಬಪಟ್ಟಣ ದ್ರೋಣಾಮುಖಂಗಳಂ ವಿಹಾರಿಸು[೧]ತ್ತಿಪ್ಪರ್ನ್ನೆಗಂ[೧] ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಪಾಟಳೀಪುತ್ರಮೆಂಬುದು ಪೊೞಲದನಾಳ್ವೊಂ ನಂದನೆಂಬರಸಂ ಪಲಕಾಲಮರಸುಗೆಯ್ಯುತ್ತಿರೆ ಮತ್ತೊಂದು ದಿವಸಂ ಚಾಣಾಕ್ಯ ನೆಂಬ ಭಟ್ಟನಂ ನಂದಂ ಪರಿಭವಿಸಿ ನೂಂಕಿಯಟ್ಟೆ ಕಳೆಯಿಸಿದೊಡಾತನುಂ ಮುಳಿದು ನಂದನಂ ಕೆಡಿಸಿ ನಂದನ ರಾಜ್ಯಸ್ಥಾನದೊಳ್ ಪೆಱನೊರ್ವನಂ ಚಂದ್ರ ಗುಪ್ತನೆಂಬೊನಂ ನಿಱಿಸಿದೊಡಾತನುಂ ಪಲಕಾಲಮರಸು ಗೆಯ್ದು ಕೞಿದೊಡಾತನ ಮಗಂ ಬಿಂದುಸಾಗರನೆಂಬೊನರಸುಗೆಯ್ದು ಕೞಿದ ಬೞಿಕ್ಕಾತನ ಮಗನಶೋಕ ನೆಂಬೊನರಸುಗೆಯ್ಯುತ್ತಿರೆ ಆತನ ಮಗಂ ಪ್ರತಾಪದಿಂ ತೇಜದಿಂದಾದಿತ್ಯನೊಳೋ ರನ್ನನಪ್ಪೊಂ ಕುಣಾಳನೆಂಬೊನಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿ ಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮಶೋಕ ಮಹಾರಾಜಂ ಪರಚಕ್ರದ ಮೇಗೆತ್ತಿ ಪೋಗಿ [೨]ಅಲ್ಲಿಂದಂ[೨] ಮಂತ್ರಿ ಪುರೋಹಿತ ತಳವಱಾದಿಗಳ್ಗಿಂತೆಂ ದೋಲೆಯನಟ್ಟಿದೊನುಪಾಧ್ಯಾಯಂಗೆ ಕೞಮೆಯ ಕೂೞುಂ ತುಪ್ಪಮುಂ [೩]ತೊವೆ ಯು[೩]ಮನುಣಲ್ಕೊಟ್ಟು ಕುಮಾರನನೋದಿಸುಗೆಂದೋಲೆಯನಟ್ಟಿದೊಡೆ ವಾಚಕ ನೋಲೆಯರ್ಥಮನಱಿಯದೆ ವಿಪರೀತಮಾಗಿಂತೆಂದು [೪]ಬಾಚಿಸಿದನ್[೪]

[೫] ಉಪಾಧ್ಯಾಯಂ ಶಾಲಿಂ ಕೂರಂಚ ಮಶಿಂ ಘೃತಂ ದತ್ವಾ ಕುಮಾರಮಂಧಾಪಯೇತ್

ಎಂದಿಂತು ವಿಪರೀತಮಾಗಿ ಲೇಖಾರ್ಥಮುಂ ಬಾಚಿಸಿದೊಡನಿಬರುಂ ಕೇಳ್ದು ಅಪ್ರತಿ ಹತಶಾಸನನಪ್ಪ ನೃಪತಿಯಾಜ್ಞೆಗೆ ಭಯಸ್ಥರ್ಕಳಾಗಿ ಉಪಾಧ್ಯಾಯಂಗೆ ಕೞಮೆಯ ಕೂೞುಂ ಮಸಿಯುಂ ತುಪ್ಪಮುಮನುಣಲ್ಕೊಟ್ಟು ಕುಣಾಳನೆಂಬ ಕುಮಾರನೆರಡುಂ ಕಣ್ಗಳುಮನೊಡೆದು ಕುರುಡಂ ಮಾಡಿದ ಕೆಲವು ದಿವಸದಿಂದರಸಂ ಪರಚಕ್ರಮುಂ ಸಾಧಿಸಿ ಬಂದು ಮಗಂ ಕುರುಡಾದುದಂ ಕಂಡಾದಮಾನುಮುಬ್ಬೆಗಂಬಟ್ಟು ಸೈರಿಸಲಾಱದೆ ಕುಣಾಳನರಸಿ ಚಂದ್ರಾನನೆಯೆಂಬೊಳ್ಗೆ ಮಗಂ ಪುಟ್ಟಿದೊಡಾತಂಗೆ [೬]ಸಂಪ್ರತಿ[೬] ಚಂದ್ರಗುಪ್ತನೆಂದು ಪೆಸರನಿಟ್ಟು ರಾಜ್ಯಾಭಿಷೇಕಂಗೆಯ್ದು ಪಟ್ಟಂಗಟ್ಟಿ ಸಮಸ್ತ ರಾಜ್ಯ[೭]ಭಾರಮೆಲ್ಲ[೭]ಮಂ ನಿರೂಪಿಸಿ ಕುಣಾಳನುಮನೆಂದಂ ಮಗನೆ ಬೇಡು ನೀನೆಂದೊಡಾತನುಂ ಕಾಕಿಣೀ ರತ್ನಮಂ ಬೇಡಿದೊಡಾ ರತ್ನಂ ಚಕ್ರವರ್ತಿಗಲ್ಲ ದಿಲ್ಲೆಂದು ಮಗಂಗೆ ಮಱುಮಾತುಗೊಟ್ಟು ಸಂಸಾರ ವೈರಾಗ್ಯಮಾದಮಾನುಂ ಪೆರ್ಚಿ ಸುವ್ರತರೆಂಬ ಭಟ್ಟಾರರ ಪಕ್ಕದೆ ಜಿನದೀಕ್ಷೆಯಂ ಕೈಕೊಂಡು ಪರತ್ರೆಯಂ ಸಾಧಿಸಿದೊಂ ಮತ್ತಿತ್ತ ಸಂಪ್ರತಿ ಚಂದ್ರಗುಪ್ತಮಹಾರಾಜನರಸುಗೆಯ್ಯುತ್ತಿರೆ ಸಮಾಧಿಗುಪ್ತರೆಂಬಾಚಾರ್ಯರವಧಿಜ್ಞಾನಿಗಳ್ ವಿಹಾರಿಸುತ್ತಂ ಬರ್ಪರಾ ಪಾಟಳೀ ಪುತ್ರಕ್ಕೆ ವಂದು ಪೊಱವೊೞಲ ಬಹಿರುದ್ಯಾನವನದೊಳಿರ್ದೊರಂ ಸಂಪ್ರತಿ ಚಂದ್ರ ಗುಪ್ತಂ ಪೋಗಿ ವಂದಿಸಿ ಧರ್ಮಮಂ ಕೇಳ್ದು ತದನಂತರಂ ತನ್ನ ಭವಾಂತರಂಗಳಂ ಬೆಸ[೮]ಗೊಂಡೊಡೆ[೮] ಭಟಾರ[೯]ರ್ ಪೇೞಲ್ ತೊಡಗಿ[೯]ದರ್

೧. ತ್ತಂ ಕಾಲಂಸಲೆ (ಚ). ೨. ಅಲ್ಲಿರ್ದು (ಘ, ಚ, ಛ). ೩. ತೋಯ (ಕ, ಗ). ೪. ಬಾಜಿಸಿದನ್ (ಖ, ಗ, ಘ), ಬೆಸಸಿದರ್ (ಛ). ೫. + ಶ್ಲೋಕ|| (ಚ). ೬. ಪ್ರತಿ (ಘ, ಚ, ಛ), ಮುಂದೆಯೂ ಈ ಪ್ರತಿ ಗಳಲ್ಲಿ ಇದೇ ಪಾಠ. ೭. (ಘ, ಚ, ಛ) ಗಳಲ್ಲಿಲ್ಲ. ೮. ಳೆ (ಘ, ಚ, ಛ). ೯. ರಿಂತೆಂ (ಚ).

ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ವೈದಿಶಮೆಂಬುದು ಪೊೞಲದನಾಳ್ವೊಂ ಜಯವರ್ಮನೆಂಬೊನರಸನಾತನ ಮಹಾದೇವಿ [೧]ಧಾರಿಣಿ[೧]ಯೆಂಬೊಳಂತವರ್ಗಳಿಷ್ಟ ವಿಷಯ ಕಾಮಭೋಗಂಗಳನನುಭವಿಸುತ್ತಿರೆ ಮತ್ತಾ ಪೊೞಲ ಸಾರೆ [೨]ಪರಾಳ[೨]ಕೂಟಮೆಂಬೂರೊಳ್ ದೇವಿಲನೆಂಬೊಂ ಶಾಕ[೩]ಟಿ[೩]ಕಂ ಪರದನಾತನ ಭಾರ್ಯೆ ಪೃಥ್ವಿಶ್ರೀಯೆಂಬೊಳಾಕೆಯ ಗರ್ಭದೊಳ್ ಪಾಪಕರ್ಮಜೀವಂ ನೆಲಸಿದೊ[೪]ಡೇನುಂ[೪] ನೆವಮಿಲ್ಲದೆ ಕಸವರಮೆಲ್ಲಂ ಕೆ[೫]ಟ್ಟತ್ತು[೫] ಮತ್ತೊಂದು ದಿವಸಂ ಪಲಂಬ[೬]ರ್ ಶಾಕಟಿಕ[೬]ಪರದರುಂಬೆರಸು ಬಂಡಿಗಳೊಳ್ ಪ[೭]ಟ್ಟಿ[೭]ಯುಂ ಧಾನ್ಯಮುಂ ತೀವಿಕೊಂಡು ಪೊೞಲ್ಗೆ ಮಾಱಲೆಂದು ಪೋಪನ್ನೆಗಮೆಡೆಯೊಳಡವಿಯೊಳ್ [೮]ಕಳ್ಳರ್[೮] ಬಟ್ಟೆಗಟ್ಟಿ [೯]ಮೇಲ್ವಾಯ್ದಱ್[೯]ದೊಡೆ ದೇವಿಲಂ ಮೊದಲಾ[೧೦]ಗೊಡೆಯ[೧೦] ಪಲಂಬರ್ ಪರದರ್ ಸತ್ತರುೞಿದರೆಲ್ಲಮೋಡಿ ಕೆಟ್ಟೊಡೆ ಬಂಡಮುಮೆತ್ತುಗಳುಂ ಮೊದಲಾಗೆಲ್ಲಮಂ ಕಳ್ಳರ್ ಕೊಂಡುಪೋದರಾ ಪ್ರಸ್ತಾವದೊಳ್ ಪೃಥ್ವಿಶ್ರೀ ಬೆಸಲೆಯಾಗಿ[೧೧] ನಂದಿಮಿತ್ರನೆಂದಾ ಕೂಸಿಂಗೆ ಪೆಸರನಿಟ್ಟು ಎರ[೧೨]ಟ್ಮೂಱು ತಿಂಗಳಿಂಗೆ[೧೨] ತಾಯ್ ಕೞಿದೊಡೆ[೧೩]ಬಂದ ನಂಟರ್ ನಡಪೆ ಬಳೆದೊಡಾ ನಂಟರುಂ ಕೞಿದುಳ್ಳರೆಲ್ಲಂ ಸತ್ತು[೧೩] ಕುಲಕ್ಷಯಮಾದೊಡೂರವರೆಲ್ಲಮಿಂತೆಂದರೀ ತರುವಲಿ ನಮ್ಮೂರೊಳಿರೆ ನಮಗೆ ಸಾವುಂ ಕೇಡುಮೋಘಮಕ್ಕುಮಿವನನಟ್ಟೆ[೧೪] ಕಳೆ[೧೫]ಯಿ[೧೫]ಮೆಂದೂರಿಂದನಿಬರುಮಟ್ಟೆ ಕಳೆದೊಡಾತನ್ ಕೆಲದೂರ್ಗಳುಮಂ ನಾ[೧೬]ಟ್ಗಳುಮಂ[೧೬] ತೊೞಲ್ದು ಬೈಕಂದಿರಿದೆಲ್ಲಿಯಾನುಂ ಪೆತ್ತುಂ ಪೆಱದೆಯುಮಿಂತು ಬಾೞುತ್ತಂ ಪದಿನೈದು ಪದಿನಾಱು ವರುಷದ ಪ್ರಾಯದಾತನಾಗಿ ವೈದಿಶಮೆಂಬ ಪೊೞಲ್ಗೆವರ್ಪೊನ್

ಅನ್ನೆಗಂ ಕಾಷ್ಠಕೂಟನೆಂಬ ಬೆಸದವಂ ಪುಳ್ಳಿಯ ಪೊಱೆಯಂ ಪೊತ್ತು [೧೭]ಪೊೞಲ್ಗೆ[೧೭] ವರ್ಪೊನಂ ಕಂಡಾತನೊಡನೆ ಗೊಟ್ಟೆಯೊಳ್ ಬಂದು ಪೊಱವೊೞಲೊಳಾರವೆಯೊಳ್ [೧೮]ಕಾಷ್ಠಕೂಟಂ ಸೇದೆಗೆಟ್ಟು ಪುಳ್ಳಿಯ ಪೊಱೆಯನಿೞಿಪಿ ಪಟ್ಟಿರ್ದೊಡೆ ತಾನುಂ ಪಟ್ಟಿರಲೆಂದು ಬಗೆದು ತಲೆಯತ್ತಿಡಲ್ಕಱಸಿಯೇನುಮಂ ಕಾಣದೆ ತರ್ಪೊನೆಣ್ಬರಿಂದಂ ತಳರ್ಚಲಾಱದಂತಪ್ಪ ಪಿರಿದೊಂದು ಸಿಲೆಯಂ ತಂದು ತಲೆಯತ್ತಿಟ್ಟು ಪಟ್ಟಿರ್ದುದಂ ಕಾಷ್ಠಕೂಟನಾತನ ಬಲಮಂ ಕಂಡು ತನ್ನ[೧೮] ಮನೆಗೊಡಗೊಂಡು ಪೋಗಿಯೂಡಿ ನಿನಗೀ ಪೊೞಲೊಳಾರಾನುಂ ನಂಟರೊಳರೆಯೆಂದು ಬೆಸಗೊಂಡೊಡಾರುಮಿಲ್ಲೆಂದೊಡಂತಪ್ಪೊಡೆ [೧೯]ನೀನೆನ್ನೊಡನಿರೆತ್ತಲುಂ ಪೋಗದಿರೆಂದು[೧೯] ತಾಂಗಿ ತಾನುಮಾತನುಮಂತಿರ್ವರುಂ

---

೧. ವಾರಣಿ (ಕ, ಖ). ೨. ಪಲಾಲ (ಘ, ಚ, ಛ). ೩. ದಿಕಂ (ಕ, ಖ, ಗ). ೪. ಡೊಂದುಂ (ಘ, ಚ, ಛ.) ೫. ಟ್ಟು .(ಘ, ಚ, ಛ). ೬. ರುಂ ಶಾಕದಿಕ (ಕ, ಖ, ಗ). ೭. ತ್ತಿ (ಸ-ಕ). ೮. ಬೇಡರುಂ (ಕ, ಖ, ಗ). ೯. ಮೇಲ್ವಾಯ್ದೆಱಗಿ (ಕ), ಮೇಲ್ಪೊಯ್ದೆಱಗಿ (ಗ), ಇರುಳು ಹಾದಿಯನಿಱಿ (ಘ,ಛ), ಹಾದಿಯನಿರುಳು ತಾಗಿ (ಚ). ೧೦. ಗಿ (ಕ,ಖ,ಗ). ೧೧. + ಯಾವೂರ್ಗೆವಂದು (ಘ, ಚ, ಛ). ೧೨. ಡು ಮೂಱು ತಿಂಗಳೊಳಗೆ (ಸ-ಕ). ೧೩. ಬಡ ನಂಟರುಂ ಕಳಿದು (ಕ,ಖ,ಗ). ೧೪. + ಕಟ್ಟೆ (ಘ, ಚ, ಛ). ೧೫. ವ (ಘ, ಚ, ಛ). ೧೬. ಡ್ಗಳುಮಂ (ಖ), ಟ್ಗಿಳ್ಮಂ (ಗ,ಘ,ಚ,ಛ). ೧೭. ಪೋಗಲ್ಕೆ (ಕ, ಖ, ಗ). ೧೮. ಪುಳ್ಳಿಯಂ ಮಾಱಿ (ಕ, ಖ, ಗ). ೧೯. ನೀನೆತ್ತಲುಂ ಪೋಗಲ್ವೇಡೆನ್ನೊಡನಿರೆಂದು (ಘ, ಚ, ಛ).

# (೮) ಧರ್ಮಘೋಷ ಭಟಾರರ ಕಥೆ

ಧರ್ಮಘೋಷಭಟಾರರ ಕಥೆಯಂ ಪೇೞ್ವೆಂ :

**ಗಾಹೆ ||** ಚಂಪಾಏ ಮಾಸಖವಣಂ ಕರಿತ್ತು ಗಂಗಾತಟಮ್ಮಿ ತಣ್ಹಾಏ |
ಘೋರಾಏ ಧಮ್ಮಘೋಸೋ ಪಡಿವಣ್ಣೋ ಉತ್ತಮಂ ಅಟ್ಠಂ ||

[ಚಂಪಾಏ – ಚಂಪೆಯೆಂಬ ಪೊೞಲೊಳ್, ಮಾಸಖವಣಂ ಕರಿತ್ತು – ಮಾಸೋಪವಾಸಂಗೆಯ್ದು, ಗಂಗಾತಟಮ್ಮಿ – ಗಂಗಾಮಹಾನದಿಯ ತಡಿಯೊಳ್, ತಣ್ಹಾಏ – ನೀರೞ್ಕೆಯಿಂದಂ, ಘೋರಾಏ – ಆದಮಾನುಂ ಕಡಿದಪ್ಪುದಱಿಂದಂ, ಧಮ್ಮಘೋಸೋ–ಧರ್ಮಘೋಷನೆಂಬ ಭಟ್ಟಾರಕಂ, ಪಡಿವಣ್ಣೋ–ಪೊರ್ದಿದೊಂ, ಉತ್ತಮಂಅಟ್ಠಂ – ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [೧]ಕೌಶಂಬಿ[೧]ಯೆಂಬುದು ನಾಡಲ್ಲಿ ವಾರಣಾಸಿಯೆಂಬುದು ಪೊೞಲದನಾಳ್ವೊಂ ಕೀರ್ತಿಧರನೆಂಬೊನರಸನಾತನ[೨] ಮಹಾದೇವಿ[೩]ಯರ್ಕಳ್ ಅರತಿ ರತಿಯೆಂಬೊರಾ[೩] ಇರ್ವರ್ಗ್ಗಂ ಮ[೪]ಕ್ಕ[೪]ಳ್ ಧರ್ಮಘೋಷನುಂ ಧರ್ಮಕೀರ್ತಿಯುಮೆಂಬೊರಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ [೫]ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ[೫] ವಿಹಾರಿಸುತ್ತಂ ಬರ್ಪೊರಾ ವಾರಣಾಸಿಗೆ ವಂದು ಬಹಿರುದ್ಯಾನ ವನದೊಳ್ ಸ್ಫಟಿಕಶಿಲಾತಲದ ಮೇಗೆ ಪಂಥಾತಿಚಾರ ನಿಯಮಂಗೆ[೬]ಯ್ದಿರ್ದ[೬] [೭]ಗುಣೋತ್ತಮರೆಂಬ ಭಟಾರರಂ[೭] ವನಕ್ರೀಡೆಗೆವೋದ ಧರ್ಮಘೋಷನುಂ ಧರ್ಮಕೀರ್ತಿ ಕುಮಾರನುಂ ಕಂಡು ಬಂದಿಸಿ ಭಟಾರಾ ಎಮಗೆ ಧರ್ಮಮಂ ಪೇೞಿಮೆಂದೊಡೆ ಭಟಾರರಿಂತೆಂದು ಧರ್ಮಮಂ ಪೇೞ್ದಿರ್ :

**ವೃ ||** ಕೋ ಧರ್ಮಃ ಪ್ರವರೋ ದಯಾತ್ಮಸುಭಗಃ ಕಃ ಸ್ಯಾನ್ನರಃ ಪಂಡಿತಃ |
ಕಾ ಯೋಷಿದ್ವಶಗಾ ಕಲಿಷ್ಕಯತಿ (?) ಚೇತ್ ಕ್ರೋಧೋಽಶುಭಸ್ಯೋದಯಃ ||
ಕಾಽಲಕ್ಷ್ಮೀರವಿಚಾರ ಕಾರ್ಯಘಟನಾ ಕಿಂ ಮಿತ್ರಮಾತ್ಮಾಽಽತ್ಮನಃ |
ಕಿಂ ಸೌಖ್ಯಂ ಭುವಿ ಶಾಸ್ತ್ರವಾಚನಮತಿಃ ಕಾನಾ ಗತಿರ್ನಿರ್ವೃತಿಃ ||

ಸಮ್ಯಕ್ತ್ವೋತ್ತಮಹಸ್ತಿಮಸ್ತಕಗತಃ ಸುಜ್ಞಾನಕೇತುವ್ರಜೋ |
ನಾನಾಶೀಲಗುಣವ್ರತೋರುಪೃತನಃ ಸ್ವಾಧ್ಯಾಯಶಂಖಧ್ವನಿಃ ||
ಭಾಸ್ವತ್ಸಂವರ ಭೂರಿಚಾರುಕವಚೋ ನಾತೀವ ತೀಕ್ಷ್ಣಾಯುಧಃ |
ಸೇವ್ಯೋ ಧರ್ಮಮಹಾನೃಪೋ ಬುಧಭಟೈಃ ಸ್ವರ್ಮೋಕ್ಷವೃತ್ತಿಪ್ರದಃ ||

**ಶ್ಲೋಕ ||** ಧರ್ಮಾರ್ಥಕಾಮಮೋಕ್ಷಾಣಾಂ ಯಸ್ಯೈಕೋಪಿ ನ ವಿದ್ಯತೇ |
ಅಜಾಗಲಸ್ತನಸ್ಯೈವ ತಸ್ಯ ಜನ್ಮ ನಿರರ್ಥಕಂ ||

---

೧. ಕಾಶಿ (ಘ,ಚ,ಛ). ೨. + ರಸಿ (ಘ,ಚ,ಛ). ೩. ಯೆಂಬೊಳಾ (ಘ,ಚ,ಛ). ೪. ರ್ಕಳ್ (ಘ). ೫. ಗುಣೋತ್ತಮ ಭಟಾರರೆಂಬ ದಿವ್ಯಜ್ಞಾನಿಗಳು ನಾನಾ ದೇಶಂಗಳಂ (ಚ) ೬. ಯಿದುಱಳ್ದ (ಕ), ಗೆಯಿದಿಳ್ದ (ಖ). ೭. (ಚ) ದಲ್ಲಿ ಇಲ್ಲ.

ವೃ || ಯೇಷಾಂ ನ ವಿದ್ಯಾ ನ ತಪೋ ನ ದಾನಂ |
ನಾಪ್ಯೇವ ಶೀಲಂ ನ ಗುಣೋ ನ ಧರ್ಮಃ ||
ತೇ ಮರ್ತ್ಯಲೋಕೇ ಭುವಿ ಭಾರಭೂತಾ |
ಮನುಷ್ಯರೂಪೇಣ ಮೃಗಾಶ್ಚರಂತಿ ||

ಶ್ಲೋಕ || ಕ್ರಿಮಯಃ ಕಿಂ ನ ಜೀವಂತಿ ಭಕ್ಷಯಿತ್ವಾ ಪರಸ್ಪರಂ |
ಪರಲೋಕಾವಿರುದ್ಧೇನ ಯೋ ಜೀವತಿ ಸ ಜೀವತಿ ||
ಅಪವಾದೋ ಭವೇದ್ಯೇನ ಯೇನ ಚಾಪ್ರತ್ಯಯೋ ಭವೇತ್ |
ನರಕೋ ಗಮ್ಯತೇ ಯೇನ ತತ್ಕರ್ಮ ನ ಸಮಾಚರೇತ್ ||

ಇಂತು ಸಂಕ್ಷೇಪದಿಂ ಭಟಾರರ್ ಧರ್ಮಮಂ ಪೇೞೆ ಕೇಳ್ದಿರ್ವರ್ಗ್ಗಂ ವೈರಾಗ್ಯಮಾಗಿ ತಾಯುಂ ತಂದೆಯುಂ ಸ್ವಜನ[೧] ಬಂಧುವರ್ಗಮುಮಂ ಬಿಡಿಸಿ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂಗಳಂ ತೊಱೆದು ಗುಣೋತ್ತಮ ಭಟಾರರ ಪಕ್ಕದೆ ತಪಂಬಟ್ಟು ಪನ್ನೆರಡು ವರ್ಷಂಬರೆಗಂ ಗುರುಗಳೊಡನಿರ್ದು ಪ್ರಥಮಾನುಯೋಗ ಚರಣಾನುಯೋಗ ಕರಣಾನುಯೋಗ ದ್ರವ್ಯಾನುಯೋಗಂಗಳಂ ಕಲ್ತು ಶಾಸ್ತ್ರಪಾ[೨]ರಂ[೨]ಗರಾಗಿ ಭಟಾರರಂ ಬೆಸಗೊಂಡವರನುಮತದಿಂದಿರ್ವರುಂ ಬೇಱೆ ವೇಱೆ ವಿಹಾರಿಸಲ್ ತಗುಳ್ದು ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚಂಪಾನಗರಕ್ಕೆ ಪೋಗಿ ತಾಮರೆಗೊಳದ ತಡಿಯ ಮ[೩]ಱೆ[೩]ಯೊಳಿರ್ವರುಂ ಮಾಸೋಪವಾಸಂಗೆಯ್ದು ಪಾರಣೆಯ ದಿವಸದಂದು ಚಂಪಾನಗರದ ಶ್ರಾವಕರ್ಕಳೆಲ್ಲಂ ನಮ್ಮ ನೋಂತುದನಱಿವರದು ಕಾರಣದಿಂ ನಮಗೆ ಪಾರಣೆಯಂ[೪]ಮಾಟ್ಪಾಗಳ ಯಥಾಕರ್ಮದ[೪] ದೋಷಂ ಸಾರ್ತರ್ಕುಮದಱಿಂ ನಾಮಿಲ್ಲಿ ಚರಿಗೆವುಗದೆ ಗಂಗೆಯ ತಡಿಯೊಳಿರ್ದ ತುಱುಪಟ್ಟಿಗೆ ಪೋಪಮೆಂದಿರ್ವರುಂ ಪೋಪರ್

ಅನ್ನೆಗಮಾ ತುಱುಪಟ್ಟಿಯುಮಲ್ಲಿಂದೆರ್ದು[೫] ನಾಡೆ ಗೆಂಟು ಪೋದತ್ತು ಪೋದೊಡೆ ಧರ್ಮಕೀರ್ತಿ ಭಟಾರರ್ ಪೆಱತೊಂದು ತುಱುಪಟ್ಟಿಗೆ ಪೋದರ್ ಧರ್ಮಘೋಷ ಭಟಾರರ್ ಪೋಗಲಾಱದೆ ಗಂಗೆಯ ತಡಿ[೬]ಯ[೬] ಮರದ ಕೆೞಗೆ ಪಸಿವು ನೀರಳ್ಕೆಯಿಂ ಸೇದೆಗೆಟ್ಟು ಬಸಮೞದಿರ್ದೋರಂ ಗಂಗಾದೇವತೆ ಕಂಡನುಕಂಪೆಯುಂ ಭಕ್ತಿಯುಂ ಕಾರಣಮಾಗಿ ಸರ್ವಾಭರಣಭೂಷಿತೆಯಾಗಿ ದಿವ್ಯಮಪ್ಪ ಶ್ವೇತವಸ್ತ್ರಮನುಟ್ಟು ಸುವರ್ಣಮಯಮಪ್ಪ ಪಿರಿಯ ಕರಗಮಂ ತೆಕ್ಕನೆ ತೀವಿ ತಣ್ಣಿದವುಂ ಸುಗಂಧ[೭]ಮು[೭]ಪ್ಪ ನೀರ್ಗಳಂ ತಂದು ಧರ್ಮಘೋಷ ಭಟಾರರನಿಂತೆಂದಳ್ ಭಟಾರಾ ಪ್ರಾಸುಕಮಪ್ಪ ನೀರಂ ಪೊ[೮]ಟ್ತಿದೊ[೮]ಳ್ ಬಂದುದಂ ಕುಡಿದು ನಿಮ್ಮ ಸೇದೆಯ್[೯]ನಾಱಿಸಿಂ ನಿಮಗರಮನೆಗೆ ಪೋಗಿ ಕೂೞಂ ತಂದಪೆನನ್ನೆವರಂ[೯] ನೀರಂ ಕುಡಿದು ತೃಷೆಯಂ ಪಿಂಗಿಸುವುದೆಂದೊಡೆ ಭಟಾರರಾವೊಲ್ಲೆವಬ್ಬಾ ಕುಡಿಯಲ್ಕಾಗದೆಂದೊಡೆ ಗಂಗಾದೇವತೆ ಪೂರ್ವವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಂಕರ ಪರಮ ದೇವರಂ ಕಂಡು ಬಂದಿಸಿ ಇಂತೆಂದು ಬೆಸಗೊಂಡಳ್

೧. + ಪರಿಜನ (ಘ,ಚ,ಛ). ೨. ರಾವಾರ (ಘ,ಚ,ಛ). ೩. ನೆ (ಘ,ಚ,ಛ). ೪. ಮಾಡುವರಲ್ಲಿಯಾದ (ಘ,ಚ,ಛ). ೫. + ಪೆಱತೊಂದೆಡೆಗೆ (ಘ,ಚ,ಛ). ೬. ಯಾಲದ (ಘ,ಚ,ಛ) ೭. ಮುಮ (ಖ,ಘ,). ೮. ೞ್ತಱೊ (ಘ,ಚ,ಛ). ೯. ನನ್ನೆಗಮಾಱಿಸಿ ಮನೆಗವೋಗಿ ಕೂಳುಮಂ ನಿಮಗೆ ತಂದಪ್ಪೆನನ್ನೆಗಂ (ಕ,ಖ,ಗ).

ಭಟಾರಾ ಒರ್ವರ್ ಋಷಿಯರ್ ನೀರಱ್ಕೆಯಿಂದಂ ಕರಂ ಸೇದೆಗೆಟ್ಟು ಬಸಮೞಿದಿರ್ದೋರಂ ಕಂಡು ಪಿರಿದೊಂದು ಪೊನ್ನ ಕರಗಮಂ ತೆಕ್ಕನೆ ತೀವಿಯಾದ ಮಾನುಂ ತಣ್ಣಿದುವುಂ ಕಮ್ಮಿದುವುಮಪ್ಪ ನೀರ್ಗಳಂ ಪೊ[೧]ಟ್ಟಿದೊ[೧]ಳ್ ಕೊಂಡು ಪೋಗಿ ಕುಡಿಯಲೆಱ[೨]ಯೆ ಕೊಳ್ದ[೨]ರಿಲ್ಲೆಂದೊಡೆ ಭಟಾರರೆಂದರ್ ಪ್ರಾಸುಕ ಮಾದೊಡಂ ಪೊ[೩]ಟ್ಟಿದೊ[೩]ಳ್ ತಂದೊಡಂ ದೇವರ್ಕಳ ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗ್ಗಣಲುಂ ಕುಡಿಯಲುಂ ತಗದು ನಿಮಗೆ ಸಮ್ಯಕ್ತ್ವಮುಂ ಪೂಜೆಯುಂ ಋಷಿಯರ್ಕಳ್ಗೆ ಪ್ರಾತಿಹಾರ್ಯಮಂಗೆಯ್ವುದುಂ ನಿಮ್ಮ [೪]ಭಿಪ್ರಾಯ[೪]ಮಿನಿತೆ ಯೆಂದು ಪೇೞ್ದೊಡೆ ತೀರ್ಥಂಕರ ಪರಮ ದೇವರ ಮಾತಂ ಕೇಳ್ದು ಬೇಗಂ[೫] ಗಂಗಾದೇವತೆ ಧರ್ಮಘೋಷ ಭಟಾರರ್ಗ್ಗೆ ತಣ್ಣಿತಪ್ಪಗಾಳಿಯುಂ ಸುಗಂಧ ಜಲ ವರ್ಷಮುಮಂ ಮಾಡಿದೊಡಾಪ್ಯಾಯನಮಾಗಿ ಶುಕ್ಲಧ್ಯಾನಮಂ ಧ್ಯಾನಿಸಿ[೬] ಘಾತಿ ಕರ್ಮಂಗಳಂ ಕಿಡಿಸಿ[೭]ಕೇವಲ ಜ್ಞಾನಿಯಾದೊಡೆ ಚತುರ್ವಿಧಮಪ್ಪ ದೇವನಿಕಾಯಂ ಬಂದರ್ಚಿಸಿ ಪೂಜಿಸಿ ಪೋದೊಡವರುಂ ಬೞಿಕ್ಕಘಾತಿಕರ್ಮಗಳಂ ಕಿಡಿಸಿ[೭] ಮೋಕ್ಷಕ್ಕೆ ವೋದರ್

ಮತ್ತಮವರಿಂ ಕಿಱಿಯರ್ ಧರ್ಮಕೀರ್ತಿ ಭಟಾರರ್[೮] ಪೆಱತೊಂದು ತುಱು ಪಟ್ಟಿಗೆ ಪೋದೊಡಾ[೮] ತುಱುಪಟ್ಟಿಯುಮಲ್ಲಿಂದೆರ್ದು ಪೆಱತೊಂದು ದೆಸೆಗೆ ನಾಡೆ ಗೆಂಟುಪೋದೊಡೆ ನಿರಾಶೆಯಾಗಿ ಪಸಿವುಂ ನೀರಱ್ಕೆಯಿಂದಂ ಬಾ[೯]ಧಿ[೯]ಸೆ ಪಟ್ಟೊ ರಾಗಿ [೧೦]ಸೇದೆಗೆಟ್ಟು[೧೦] ಬಸಮೞಿದು ಶುಭ ಪರಿಣಾಮಕ್ಕೆ ಸಂದೋರಂ। ಮುನ್ನಿನ ದೇವತೆ ಕಂಡಱಿದು ಪ್ರತಿಬೋಧಿಸಲ್ ತಗುಳ್ದವರಂ ತಿಳಿಪಲಾಱದೆ ಮತ್ತೆ ಪೂರ್ವ ವಿದೇಹಕ್ಕೆ ಪೋಗಿ ಸೀಮಂಧರ ತೀರ್ಥಕರ ಪರಮಸ್ವಾಮಿಯಂ ಕಂಡು ಪೊಡೆವಟ್ಟು ಅವರ ಸಮಾವಸ್ಥೆಯೆಲ್ಲಮಂ ಭಟಾರರ್ಗ್ಗೆ ಪೇೞ್ದು ಸಮಾಧಿಸಂಧಾನೋಪಾಯಮಂ ಬೆಸಗೊಂಡೊಡೆ ಸರ್ವಜ್ಞರಿಂತೆಂದು ಪೇೞ್ದರಾಸನ್ನ ಭವ್ಯರ್ ಮೂಱನೆಯ ಭವದೊಳ್ ಮೋಕ್ಷಕ್ಕೆವೋಪರೆಂದು ಸೀಮಂಧರ ತೀರ್ಥಕರ ಪರಮದೇವರ್ ಪೇೞ್ದರೆಂಬುದಂ ಕೇಳ್ದಾಗಡೆ ಅಶುಭಪರಿಣಾಮಮಂ ತೊಱೆದು ನೀಗಿ ಶುಭ ಪರಿಣಾಮದೊಳ್ ಕೂಡಿ ಸಮಾಧಿಯನೊಡೆಯರಪ್ಪರ್ ನೀಂ ಬೇಗಂ ಪೋಗಿ ಪ್ರತಿ ಬೋಧಿಸೆಂದು [೧೧]ಪೇೞ್ದೊಡೆ ಗಂಗಾದೇವತೆಯಂತೆಗೆಯ್ವೆನೆಂದು ಪೊಡೆವಟ್ಟು ಪೋಗಿ ಆ ರಿಸಿಯ[೧೨]ರನೆಯ್ದಿ ಇಂ[೧೨]ತೆಂದಳ್ ಭಟಾರಾ ನೀಮೀ ಭವದಿಂ ತೊಟ್ಟು ಮೂಱನೆಯ ಭವದೊಳ್ ಕರ್ಮಕ್ಷಯಂಗೆಯ್ದು ಕೇವಳ ಜ್ಞಾನಿಯಾಗಿ ಮೋಕ್ಷಕ್ಕೆ ವೋದಪಿರೆಂದು ಸೀಮಂಧರ ತೀರ್ಥಕರ ಪರಮದೇವರ್ ಪೇೞ್ದರೆಂದೊಡಾ ಮಾತಂ ಧರ್ಮಕೀರ್ತಿ [೧೩]ಭಟಾರರ್[೧೩] ಕೇಳ್ದು ಉನ್ಮಾರ್ಗ[೧೪]ದಿಂದಂ[೧೪] ಮನಮನುಡುಗಿ ಸನ್ಮಾರ್ಗದೊಳ್ ನಿಱಿಸಿ :

---

೧. ಳ್ತಿಱೊ (ಘ,ಚ,ಛ,). ೨. ಯಲ್‌ಪೋದೊಡೊಲ್ದ (ಘ,ಛ), ಯಲ್‌ಪೋದೊಡೆ ಕುಡಿದ (ಚ), ಯೆಕೊಲ್ದ (ಖ). ೩. ಳ್ತಿಱೊ (ಘ,ಚ,ಛ). ೪. ಗೆಯ್ವುಧರ್ಮ (ಘ,ಚ,ಛ). ೫. + ಬಂದು (ಘ,ಚ,ಛ). ೬. + ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ (ಘ,ಚ,ಛ). ೭. (ಘ,ಚ,ಛ) ಗಳಲ್ಲಿಲ್ಲ. ೮. ಪೇಳ್ದಂತೆಯೊಂದು (ಘ), ಪೇಳ್ದಂತೊಂದು (ಚ), ಪೇಳ್ದಂತೆ ಬಂದು (ಛ). ೯. ರಿ (ಛ), ಡಿ (ಛ) ೧೦. ದೆಸೆಗೆಡೆ (ಛ). ೧೧. + ಗಣಧರ ದೇವರ್ (ಘ,ಚ,ಛ). ೧೨. ಗ್ಗಿರ್ಗಂ (ಘ,ಚ,ಛ). ೧೩. ರಿಸಿಯರ್ (ಕ,ಖ,ಗ). ೧೪. ಕ್ಕೆ ಸಂದ (ಘ,ಚ,ಛ).

**ಗಾಹೆ ॥ ಹಾ ದುಟ್ಠು ಕಯಂ ಹಾ ದುಟ್ಠು ಕಾರಿಯಂ ಹಾ ದುಟ್ಠು ಅಣುಮೋದಿಯಂ ।**
**ಜೀವೋ ಅಂತೋ ಅಂತೋ ದಜ್ಝ ಇ ಪಚ್ಛತ್ತಾವೇಣ ವೇವಂತೋ ॥**

ಎಂದು ಪೊಲ್ಲದಂ ಬಗೆದೆನೆಂದು ತನ್ನಂ ತಾಂ ಪೞಿಯುತ್ತಂ ಸೀಮಂಧರ ಸ್ವಾಮಿಗಳ ನಾಮಗ್ರಹಣಂ[೧]ಗೊಂಡಾಗಳ್[೧] ಶುಭಪರಿಣಾಮದಿಂ ಪಿಂಗಿ ಶುಭಶುದ್ಧ ಪರಿಣಾಮದೊಳ್ ಕೂಡಿ ಮಿಕ್ಕ ರತ್ನತ್ರಯಂಗಳನಾರಾಧಿಸಿ ಪದಿನಾಱನೆಯ ಕಲ್ಪದೊಳ್ ಉತ್ಕೃಷ್ಟಮಪ್ಪ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊನಚ್ಯುತೇಂದ್ರನಾಗಿ ಪುಟ್ಟಿದಂ

ಮತ್ತಂ ಪೆಱರುಮಾರಾಧಕರಪ್ಪವರ್ಗಳ್ ಧರ್ಮಘೋಷ ಭಟಾರರಂ ಮನದೊಳ್ ಬಗೆದು ಪಸಿವುಂ ನೀರಟ್ಟೆ ಮೊದಲಾಗೊಡೆಯ ಪರೀಷಹಂಗಳಂ ಸೈರಿಸಿ ಸಮ್ಯಗ್ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

೧. ಗೊಳಲೊಡನ (ಘ,ಚ,ಛ).

## (೯) ಸಿರಿದಿಣ್ಣನೆಂಬ ಭಟ್ಟಾರರ ಕಥೆ

ಸಿರಿದಿಣ್ಣ[೧]ಭಟಾರರ[೧]ಕಥೆಯಂ ಪೇೞ್ವೆಂ :

**ಗಾಹೆ** ॥ ಸೀದೇಣ ಪುವ್ವವೇರಿಯ ದೇವೇಣ ವಿಗುವ್ವಿದೇಣ ಘೋರೇಣ ।
ಸಂಸಿತ್ತೋ ಸಿರಿದಿಣ್ಣೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಸೀದೇಣ – ಅಯ್ಕಿಲಿಂದಂ, ಪುವ್ವವೇರಿಯ ದೇವೇಣ – ಮುನ್ನಿನ ಭವದ ಪಗೆವನಪ್ಪ ದೇವನಿಂದಂ, ವಿಗುವ್ವಿದೇಣ – ವಿಗುರ್ವಿಸೆಪಟ್ಟುದಱಿಂದಂ, ಘೋರೇಣ – ಆದಮಾನುಂ ಕಡಿದಪ್ಪುದಱಿಂದಂ, ಸಂಸಿತ್ತೋ – ತಳಿಯಪಟ್ಟೊನಾಗಿ, ಸಿರಿದಿಣ್ಣೋ – ಸಿರಿದಿಣ್ಣನೆಂಬ ಭಟಾರಕಂ, ಪಡಿವಣ್ಣೋ – ಪೊ[೨]ದಿರ್[೨]ದೊಂ, ಉತ್ತಮಂ ಅಟ್ಠಂ – ಮಿಕ್ಕದರ್ಶನಜ್ಞಾನಚಾರಿತ್ರಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊ[೩]ಳಂಗಮೆಂ[೩]ಬುದು ನಾಡಲ್ಲಿ [೪]ಚಂಪಾ[೪]ನಗರಮೆಂಬುದು ಪೊೞಲದನಾಳ್ವೊನಧಿಗಮ ಸಮ್ಯಗ್‌ದೃಷ್ಟಿಶ್ರಾವಕಂ ಸಿಂಹರಥನೆಂಬೊನರಸಂ ಮತ್ತಿತ್ತ ಮಗಧೆಯೆಂಬುದು ನಾಡಲ್ಲಿ ಸಾಕೇತ[೫]ಮೆಂಬುದ[೫]ದನಾಳ್ವೊಂ [೬]ಶ್ರಾವಕಂ ಸು[೭]ಮಂತ[೭]ನೆಂಬೊನರಸಂ ಮತ್ತಿತ್ತ ಮಂಗಳಾವತಿಯೆಂಬುದು ನಾಡಲ್ಲಿ [೮]ಇ[೮]ಳಾಪಟ್ಟಣಮೆಂಬುದು ಪೊೞಲದನಾಳ್ವೊನಧಿಗಮ ಸಮ್ಯಗ್‌ದೃಷ್ಟಿ ಶ್ರಾವಕಂ ಜಿತಶತ್ರುವೆಂಬೊನರಸನಾತನರಸಿ ಇಳಾಮಹಾದೇವಿಯೆಂಬೊಳಾ [೯]ಅರಸನ ದಾದಿ[೯] ವಿನಯಮತಿಯೆಂಬೊಳಂತವರ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ[೧೦]ಂ ಫಾಲ್ಗುನ[೧೧]ನಂದೀಶ್ವರಂ ಬಂದೊಡೆ ಮೂವರುಂ ಮಂಡಲಿಕರುಂ ತಂತಮ್ಮ ಪೊೞಲ್ಗಳೊಳೆಂಟು ದಿವಸ ಮರ್ಹ[೧೨]ದ್ಭಟ್ಟಾರಕರ್ಗೆ[೧೨] ಮಹಾಮಹಿಮೆಗಳಂ ಮಾಡಲ್ ತೊಡಗಿದರಿತ್ತ ಜಿತಶತ್ರುವುಂ ತನ್ನ ಪೊೞಲೊ[೧೩]ಳೆಂಟು ದಿವಸಂ ಜಿನ[೧೩]ಮಹಾಮಹಿಮೆಯಂ ಮಾಡಲ್ ತೊಡಗಿದನಾತನ ದಾದಿ ವಿನಯಮತಿಯೆಂಬೊಳ್ ಗುಜ್ಜಿ ವಿರಳದಂತೆ ಆದಮಾನುಂ ವಿರೂಪೆ ಪೇ[೧೪]ಸೆಪ[೧೪]ಡುವಳ್ ನೋಡಿದ ಜನಕ್ಕೆ[೧೫]ಭಯಮಂ[೧೫] ಪಡೆವೊಳ್ ನಾ[೧೬]ಣಿಸೆ[೧೬]ಪಡುವೊಳಂತಪ್ಪಾಕೆ ಅರಸನೊಡನೆ ಜಿನಮಹಾಮಹಿಮೆಯಂ ನೋಡಲ್ ಪೋಪಾಗಳರಸನೆಂದೊನಬ್ಬಾ ನೀ[೧೭]ಮುಂ[೧೭] ಮಹಿಮೆಗೆ ಬರಲ್ವೇಡ ನಿಮ್ಮಂ ಕಂಡು ಮಹಿಮೆಗೆ ವಂದ ನೆರವಿಯಂಜುಗುಂ ಪೇಸುಗುಮಮಂಗಳಮೆಂಗುಮದಱಿಂ ನೀಮುಂ ಮನೆಯೊಳಿರಿಮೆಂದಿರಿಸಿ ತಾನುಂ ಸಹಸ್ರಕೂಟಮೆಂಬ ಚೈತ್ಯಾಲಯಕ್ಕೆ ಮಹಾಮಹಿಮೆಯಂ ಮಾಡಲ್ ಪೋದನ್

---

೧. ನೆಂಬ ರುಷಿಯರ (ಘ,ಚ,ಛ). ೨. ಳ್ದಿ (ಕ,ಖ,ಗ). ೩. ಳ್ ಗಂಗೆಯೆಂ (ಕ,ಖ,ಗ). ೪. ಪಂಚಾ (ಛ). ೫. ಪುರಮ (ಘ,ಚ). ೬. +ನಧಿಗಮಸಮ್ಯಗ್ ದೃಷ್ಟಿ (ಘ,ಚ). ೭. ಮನ (ಘ,ಚ,ಛ). ೮. ಐ (ಘ,ಚ), ಯೋ (ಛ). ೯. ಇರ್ವರ್ಗ್ಗಂಮಗಳ್ (ಕ,ಖ,ಗ). ೧೦. + ಮತ್ತೊಂದುದಿವಸಂ (ಘ,ಚ,ಛ). ೧೧. + ಮಾಸದ (ಘ,ಚ,ಛ) ೧೨. ತ್ಪರಮೇಶ್ವರಂಗೆ (ಚ). ೧೩. ಳಷ್ಟಾಹ್ನಿಕ (ಘ,ಚ,ಛ). ೧೪. ಸರ್ಪ (ಕ) ೧೫. ನಗೆಯಂ (ಘ,ಚ,ಛ). ೧೬. ಣ್ಸೆ (ಖ,ಗ), ಣ್ಚಿ (ಘ,ಚ,ಛ). ೧೭. ವು (ಕ,ಖ,ಗ).

ಇತ್ತ ದಾದಿಯುಂ ಮಗನ ಮಾಡುವ ಮಹಾಮಹಿಮೆಯಂ ನೋಡಲ್ ಪೆತ್ತಿನಿಲ್ಲೆಂದುಬ್ಬೆಗಂಬಟ್ಟು ತನ್ನಂ ತಾಂ ಪೞಿದು ನಂದೀಶ್ವರದೆಂಟು ದಿವಸ[೧]ಮಭಿಷೇಕಮುಮರ್ಚನೆಯುಮಷ್ಟೋಪವಾಸಮುಮಂ[೧]ಮಾಡಿ ದೇವರಂ ಬಂದಿಸುತ್ತಂ ಪೂಜಿಸುತ್ತಿರ್ದಳಿತ್ತರಸನುಮೆಂಟು ದಿವಸಂ ಮಹಾಮಹಿಮೆಯಭಿಷೇಕಮುಮಂ ಮಾಡಿಸಮೆಯಿಸಿದ ಬೞಿಕ್ಕೆ ದಾದಿಗೆ ಬೞಿಯಟ್ಟಿ ವರಿಸಿ ಇಂತೆಂದನಬ್ಬಾ ನೀಮಿಂತೇಕೆ ಕರಂ ಬಡಪಟ್ಟಿರ್ದ್ದಿರೆಂದೊಡೆ ದಾದಿಯಿಂತೆಂದಳ್ ಮಗನೆ ಎಂಟು ದಿವಸಮುಪವಾಸಂಗೆಯ್ದು ಮನೆಯೊಳ್ ದೇವರ್ಗ್ಗಭಿಷೇಕಮುಂ ಪೂಜೆಯುಮಂ ಮಾಡಿ[೨]ಸುತ್ತಿರ್ದೆನೆಂದೊಡೆ[೨] ಅದಂ ಕೇಳ್ದಾದಮಾನುಮರಸನೊಸೆದು ಬಡವಾದುದುಮಂ ಕಂಡು ಕರುಣಿಸಿ ಅಬ್ಬಾ ನಿಮಗೊಸೆದೆಂ ವರಮಂ ಬೇಡಿಕೊಳ್ಳಿಮೆಂದೊಡಾಕೆಯಿಂತೆಂದಳ್ ಮಗನೆ ನೀನೆನಗೊಸೆದೆಯಪ್ಪೊಡೆನಗೆಂದು ಮತ್ತ[೩]ಮೆಂಟು[೩] ದಿವಸಂ ದೇವರ್ಗ್ಗೆ ಮಹಾಮಹಿಮೆಯಂ ಮಾಡೆಂದು ಪೇೞ್ದೊಡಂತೆಗೆಯ್ವೆನೆಂದರಸಂ ದಾದಿ ಕಾರಣಮಾಗಿ ಮತ್ತಮೆಂಟುದಿವಸಂ ಮಹಾಮಹಿಮೆಯಂ ಮಾಡಲ್ ತೊಡಂಗಿದೊಡೆನ್ನ ಮಹಾಮಹಿಮೆಯೊಳೆಂತುಣ್ಬೆನೆಂದು ಪಾರಿಸದೆ ಮತ್ತಮಷ್ಟೋಪವಾಸಂಗೆಯ್ದು ಪಾರಣೆಯ ದಿವಸದಂದಾಕೆಯ ಶ್ರಮಮುಂ ಸೇದೆಯುಮಂ ಹಿಮವಂತ ಪರ್ವತದ[೪] ಪದ್ಮೆಯೆಂಬ ಕೊಳಮೊಳ್ ವಸಿಯಿಸಿರ್ಪ ಶ್ರೀಯಾದೇವತೆ ಕಂಡಱಿದು ತನ್ನ ಪರಿವಾರ ಸಹಿತಂ ವಿಮಾನಂಗಳನೇಱಿ ಮಹಾವಿಭೂತಿಯಿಂ ಬಂದು ಸ್ವರ್ಣಪೀಠದೊಳ್ ದಾದಿಯನಿರಿಸಿ ಸುಗಂಧೋದಕಂಗಳಿಂ ತೀವಿದ ಸುವರ್ಣಕಲಶಂಗಳಿಂದಮಭಿಷೇಕಂಗೆಯ್ದು ನಮೇರು ಮಂದಾರ ಸಂತಾನಕ ಪಾರಿ[೬]ಯಾತ್ರಕಮೆಂ[೬]ಬ ಪೂಗಳಂ ಸುರಿದು ಕಮ್ಮಿತ್ತಪ್ಪ ತಂಬೆಲರ್ವೀಸಿ ದೇವದುಂದುಭಿಗಳಂ ಬಾಜಿಸಿ[೫] ಶ್ರೀಯಾದೇವತೆ ತನ್ನಾವಾಸಕ್ಕೆವೋದಳ್

ಇತ್ತ ದಾದಿಯುಂ ಶ್ರೀಯಾದೇವತೆಯ ವಿಭೂತಿಯಂ ಕಂಡು ನಿದಾನಂಗೆಯ್ದು ಕೆಲವುದಿವಸದಿಂ ಕಾಲಂಗೆಯ್ದೀ ಜಂಬೂದ್ವೀಪದ ಹಿಮಮಂತ ಪರ್ವತದ ಪದ್ಮೆಯೆಂಬ ಕೊಳದೊಳ್ ಶ್ರೀಯಾದೇವತೆಯಾಗಿ ಪುಟ್ಟಿ [೭]ಇ[೭]ಳಾಪಟ್ಟಣಕ್ಕೆ ಬಂದಾ ಪೊೞಲ ಜನಂಗಳ್ಗೆಲ್ಲಮಿರುಳ್ ಕನಸಿನೊಳಾಂ ಶ್ರೀಯಾದೇವತೆಯೆಂ ನಿಮ್ಮ ಪೊೞಲ್ಗೆವಂದೆನೆನಗೆ [೮]ಶ್ರೀವಿಹಾರಮಂ[೮] ಮಾಡಿ ಎನ್ನ ಪ್ರತಿಮೆಯನ್ನಿಟ್ಟು ಪೂಜಿಸುತ್ತುಮೋಲಗಿಸುತ್ತುಮಿರಿವಾನುಂ ನಿಮಗೆ ಬೇಡಿದ ವರವನೀವೆನೆಂದು ಕನಸಿನೊಳ್ ತೋಱಿದೊಡೆ ಪೊೞಲ ಜನಮೆಲ್ಲಂ ನೆರೆದು [೮]ಶ್ರೀವಿಹಾರಮಂ[೮] ಮಾಡಿ ಶ್ರೀಯಾದೇವತೆಯ ಪ್ರತಿಮೆಯಂ ಸ್ಥಾಪಿಸಿ ಮಹಿಮೆಯಂ ಮಾಡುತ್ತಂ ಪೂಜಿಸುತ್ತಮೋಲಗಿಸುತ್ತಮಿರ್ಪುದಂ ಕಂಡಿಳಾಮಹಾದೇವಿ ಅಪುತ್ರಿಕೆ ಮಕ್ಕಳಂ ಬೇಡಿ ಪನ್ನೆರಡು ವರುಷಂ ಬ[೯]ರೆಗಂ ನಿಚ್ಚಲುಂ ಶ್ರೀವಿಹಾರಕ್ಕೆ[೯] ವೋಗಿ ಶ್ರೀಯಾದೇವತೆಯನರ್ಚಿಸುತ್ತಂ ಪೂಜಿಸುತ್ತಂ ಮಹಾಮಹಿಮೆಯಂ ಮಾಡುತ್ತಂ

೧. + ಬಂದಿಸಿರ್ದೆಮೆಂದುದಂ (ಘ,ಛ), + ಬಂದಿಸುತ್ತಿರ್ದೆನೆಂದು ಪೇಳೆ (ಛ). ೨. ಮೊಂದು (ಕ,ಖ,ಗ). ೩. + ಮೇಗೆ (ಘ,ಛ). ೪. ಜಾತಂಗಳಿಂ (ಘ,ಚ,ಛ). ೫. + ಪೂಜಿಸಿ (ಘ,ಛ). ೬. ಏ (ಘ,ಛ). ೭. ಸಿರಿಪುರಮಂ (ಘ,ಚ,ಛ). ೮. ಮಷ್ಟೋಪವಾಸಂ ಗೆಯ್ದು ಮನೆಯೊಳೆಂಟು ಧಿವಸ ಮುನ್ನ ಹಣಮುಮನರ್ಚನೆಯುಮಂ (ಕ,ಖ,ಗ). ೯. ರಂ ನಿಚ್ಚನಿಚ್ಚಂ ಸಿರಿಪುರಕ್ಕೆ (ಘ,ಛ).

ಆಡುತ್ತಂ ಪಾಡುತ್ತಮೋಲಗಿಸುತ್ತಮಿರೆಯದಂ ಕಂಡಱಿದು ಶ್ರೀಯಾದೇವತೆ ಪೂರ್ವವಿದೇಹಕ್ಕೆ ಪೋಗಿ ಸ್ವಯಂಪ್ರಭರೆಂಬ ತೀರ್ಥಕರ ಪರಮದೇವರಂ ಕಂಡೆಱಗಿ ಪೊಡೆಮಟ್ಟಿಂತೆಂದು ಬೆಸಗೊಂಡಳ್ ಭಟಾರಾ ಎನ್ನ ಪೊಟಲೊಳಿರ್ಪ ಇಳಾಮಹಾದೇವಿಗೆ ಮಕ್ಕ[೧]ಳೀನಕ್ಕುಮೊ[೧] ಎಂದು ಬೆಸಗೊಂಡೊಡೆ ಭಟಾರರಿಂತೆಂದರ್ ಸ್ವರ್ಗದಿಂ ಬಟ್ಟಿ ಬಂದಿಲ್ಲಿ ಒರ್ವ ದೇವಂ ಇಳಾಮಹಾದೇವಿಗೆ ಮಗನಾಗಿ ಪುಟ್ಟುಗುಮೆಂದೊಡದಂ ಕೇಳ್ದು ಭಟಾರರ್ಗ್ಗೆಱಗಿ ಪೊಡೆವಟ್ಟು ಇಳಾಪಟ್ಟಣಕ್ಕೆ ಪೋಗಿ [೨]ಇ[೨]ಳಾಮಹಾದೇವಿಗೆ ಕನಸಿನೊಳಿಂತೆಂದು ಪೇಟ್ದಳಿಳಾಮಹಾದೇವಿ ನಿನಗೆನ್ನ ಪ್ರಸಾದದೆ ಸೌಧರ್ಮಕಲ್ಪದೊಳ್ ಮೇಘವಾಲಮೆಂಬ ವಿಮಾನದಿಂ ಬಟ್ಟಿ ವರ್ಧಮಾನನೆಂಬ ದೇವಂ ಬಂದು ನಿನಗೆ ಮಗನಾಗಿ ಪುಟ್ಟುಗುಮೆಂದು ಶ್ರೀಯಾದೇವತೆ ಪೇಟ್ದೊಡಿಳಾ ಮಹಾದೇವಿಯಾದಮಾನುಂ ಸಂತಸಂಬಟ್ಟಿರ್ದು ಕೆಲವು ದಿವಸದಿಂ ಗರ್ಭಮಾಗಿ ನವಮಾಸಂ ನೆಱೆದು ಮಗನಂ ಪೆತ್ತೊಡೆ ಶ್ರೀಯಾದೇವತೆ ಮಗನಂ ಕೊಟ್ಟಳೆಂದಾ ಕೂಸಿಂಗೆ ತಾಯುಂ ತಂದೆಯುಂ ನಂಟರುಮೆಲ್ಲಂ ನೆರೆದು ಸಿರಿದಿಣ್ಣನೆಂದು ಪೆಸರನಿಟ್ಟರ್

ಆತನುಂ ಶುಕ್ಲಪಕ್ಷದ ಚಂದ್ರನಂತೆ ಕ್ರಮಕ್ರಮದಿಂ [೩]ಬ[೩]ಳೆದು ನವಯೌವನನುಂ ಸರ್ವಕಳಾಕುಶಳನುಮಾಗಿರ್ಪನ್ನೆಗಮಿತ್ತ ಸಾಕೇತಪುರಾಧಿಪತಿಯ[೪]ಪ್ಪ[೪] ಸು[೫]ಮಂತನೆಂ[೫]ಬರಸನ ಮಗಳ್ ಸುಮತಿಯೆಂಬೊಳಾಕೆಯ ಸ್ವಯಂವರಕ್ಕರಸುಮಕ್ಕಳೆಲ್ಲಂ ನೆರೆದಿರ್ದಲ್ಲಿಗೆ ಸಿರಿದಿಣ್ಣಂಗಂ ಬಟಿಯಟ್ಟಿ ಬರಿಸಿದೊಡೆ ಸ್ವಯಂಬರದೊಳ್ ಸುಮತಿ[೬]ಯೆಲ್ಲರ[೬] ನೋಡಿಯಾರುಮಂ ಮೆಚ್ಚದೆ ಸಿರಿದಿಣ್ಣಂಗೆ ಮಾಲೆಸೂಡಿದೊಡೆ ಮದುವೆಯಾಗಿ ಕೆಲವು ದಿವಸಮಲ್ಲಿರ್ದು ಮಾವನವರಂ ಬೆಸಗೊಂಡಿಳಾಪಟ್ಟಣಕ್ಕೆ [೭]ವೋಪೆಮೆಂದೊಡಾತಂ ತನ್ನ ಮಗಳಪ್ಪ ಸುಮತಿಗೆ[೭] ಬಟಿವಟಿಗೊಟ್ಟು ಮಗಳೊಡನೆ ವಾಚಾಳನಪ್ಪ ಗಿಳಿಯುಮನಟ್ಟಿದೊಡವರ್ಗಳುಂ ಕತಿಪಯ ದಿವಸಂಗಳಿಂದಿಳಾಪಟ್ಟಣ[೮]ಕ್ಕೆ ಪೋಗಿ[೮] ಸುಖದಿಂದಿರೆ

ಮತ್ತೊಂದು ದಿವಸಂ ಗಿಳಿಯಂ ಸಾಕ್ಷಿಮಾಡಿ ಇರ್ವರು ಚದುರಂಗಮಾಡುತ್ತಿರೆ [೯]ಅರಸಿಯರಸನಂ ಗೆಲ್ದೊಡೆ ಗಿಳಿ ನೆಲದೊಳೆರಡು ಬರೆಯಂ ಬರೆಗುಮರಸನರಸಿಯಂ ಗೆಲ್ದೊಡೆ ಒಂದೆ ಬರೆಯಂ[೯]ಬರೆಗುಮಿಂತು ಪಿರಿದುಂ ಬೇಗಮಾಡಿ ಅರಸನರಸಿಯಂ ಗೆಲ್ದೊಡೆರಡು ಬರೆಯಂ [೧೦]ತೆಗೆದು[೧೦]ದನರಸಂ ಕಂಡು ಕಡುಮುಳಿದದಱ [೧೧]ಗೋಣಂ ಮುಱಿದೊಡಾ[೧೧] ಗಿಳಿಯುಂ ಸತ್ತಾ ಪೊಟಲ ಬಹಿರುದ್ಯಾನವನದೊಳ್ ವ್ಯಂತರದೇವನಾಗಿ ಪುಟ್ಟ[೧೨]ತಿ[೧೨]ತಿರ್ವರುಂ ಪಲಕಾಲಮಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಿರ್ಪನ್ನೆಗಂ ಮತ್ತೊಂದು ದಿವಸಂ ಸಪ್ತತಳ

---

೧. ಳಕ್ಕುಮೊ ಆಗದೊ (ಘ,ಚ,ಛ) ೨. ಇರುಳೇ (ಘ,ಚ,ಛ). ೩. ಬೆ (ಕ,ಖ,ಗ). ೪. ಪ್ಪಾತಂ (ಕ,ಖ,ಗ). ೫. ಮತಿಯೆಂ (ಘ,ಚ,ಛ). ೬. + ಸಮಸ್ತ ರಾಜಪುತ್ರರಂ (ಛ). ೭. ಪೋಪಮೆಂದೊಡಂ ಸುಮಂತಂ ಮಗಳ್ಗೆ (ಕ,ಖ,ಗ) ೮. ಮನೆಯ್ದಿ (ಘ,ಚ,ಛ). ೯. ಯರಸಿಯರಸನಂ ಗೆಲ್ದಡೆ ನೆಲದೊಳೊಂದು ಬರೆಯಂ ಬರೆಗುಮರಸನನರಸಿ ಗೆಲ್ದೊಡೆರಡು (ಘ), ಯರಸಿಯನರಸಂ ಗೆಲ್ದೊಡೆ ನೆಲದೊಳೊಂದು ಬರೆಯಂ ಬರೆಗುಮರಸನನರಸಿ ಗೆಲ್ದೊಡೆರಡುಬರೆಯಂ(ಚ,ಛ), ಬರೆಯುಂ ಎಂಬುದಕ್ಕೆ (ಖ,ಗ) ಗಳಲ್ಲಿ ಗರೆಯುಂ ಎಂದು ಪಾಠ. ೧೦. ತೇವು (ಘ,ಛ.) ೧೧. ಗೊಂಕೆಯುಂ ನುಲಿದು ಕೊಂದನಾ (ಘ,ಚ,ಛ). ೧೨. ದೊಂ ಇಂ (ಕ,ಗ), ಟ್ಟಂತಿ (ಖ.)

ಪ್ರಾಸಾದದ ಮೇಗಿರ್ದರುಂ ದಿಶಾವಳೋಕನಂ ಗೆಯ್ಯುತ್ತಿರ್ಪನ್ನೆಗಂ ಸಹಸ್ರ ಕೂಟಾಕಾರಮಪ್ಪುದೊಂದು ಮುಗಿಲಂ ಕಂಡಿಂತುಟೊಂದು ಚೈತ್ಯಾಲಯಮಂ ಮಾಡಿಸುವೆನೆಂದು ಪಲಗೆಯೊಳ್ ರೇಖೆ[೧]ಗೊಂಡು[೧] ಮತ್ತೆ ನೋಟ್ಪನ್ನೆಗಂ ಕರಗಿದುದಂ ಕಂಡದುವೆ ನಿರ್ವೇಗಕ್ಕೆ ಕಾರಣಮಾಗಿ ತಾಯುಂ ತಂದೆಯುಂ ನಂಟರುಮಂ ಬಿಡಿಸಿ ನಿಶ್ಶಲ್ಯಂ ಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂ[೨]ಗಳಂ[೨] ತೊಱೆದು ವರಧರ್ಮಭಟ್ಟಾರರ ಪಕ್ಕದೆ ತಪಂಬಟ್ಟು ಪನ್ನೆರಡು ವರುಷಂಬರೆಗಂ ಗುರುಗಳನಗಲದಿರ್ದು ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಬೞಿಕ್ಕೆ ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಮಾಘ ಮಾಸದಂದಿಳಾವಟ್ಟಣಕ್ಕೆ ವಂದಾ ಪೊೞಲ ಬಹಿರುದ್ಯಾನವನದೊಳಿರ್ದು ರಾತ್ರಿ ಪ್ರತಿಮಾಯೋಗದೊಳ್ ನಿಂದರ್

ಅನ್ನೆಗಂ ಮುನ್ನವರ ಕೈಯೊಳ್ ಸತ್ತ ಗಿಳಿ ವ್ಯಂತರ ದೇವನಾಗಿ ಅಲ್ಲಿ ಪುಟ್ಟಿದು[೩][ದು][೩] ಕಂಡೇನುಂ ಕಾರಣಮಿ[೪]ಲ್ಲೆ[೪]ನ್ನಂ ಕೊಂದನೆಂದು ಮುಳಿದಾದ ಮಾನುಂ ಘೋರಮಪ್ಪ ವಾತಮುಂ ಶೀತಮುಮಂ ವಿಗುರ್ವಿಸಿ ನೀರ್ಗಳಂ ಮೇಗೆ ಸುರಿದು ಬೀಸುತ್ತ[೫]ಮಿಂ[೫]ತು ನಾಲ್ಕು ಜಾವಮುಂ ಘೋರಾಕಾರಮಾಗಿಯುಪ ಸರ್ಗಮಂ ಮಾಡೆ ಭಟಾರರುಂ ದೇವೋಪಸರ್ಗಮೆಂಬುದನಱಿದು

**ಗಾಹೆ ॥** ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝ ಣ ಕೇಣ ಚಿ ॥

**ಶ್ಲೋಕ ॥** *ಅಚ್ಛೇದ್ಯೋಽನಂತ ಸೌಖ್ಯೋಽಹಂ ವೇತ್ತಾಽಪೂರ್ವೋ ನಿರಂಜನಃ ।
ಸರ್ವದುಃಖಾಕರಂ ದೇಹಂ ತ್ಯಜಾಮ್ಯೇತತ್ ಪರಿಸ್ಫುಟಂ ॥

ಎಂದಿಂತು ಸಮತ್ವೀಭಾವನೆಯುಂ ಭಾವಿಸಿ[೬] ಶುಕ್ಲಧ್ಯಾನ[೭]ಮಂ ಜಾನಿಸಿ ಎಂಟು[೭] ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ವೋದರ್

ಮತ್ತಂ ಪೆಱರುಂ ರತ್ನತ್ರಯಂಗಳನಾರಾಧಿಸುವ ಭವ್ಯರ್ಕಳ್ ಸಿರಿದಿಣ್ಣ ಭಟ್ಟಾರರಂ ಮನದೊಳ್ ಬಗೆದು ದೇವೋಪಸರ್ಗ ಮನುಷ್ಯೋಪಸರ್ಗ ತಿರಿಕೋಪ ಸರ್ಗಮಚೇತನೋಪಸರ್ಗಮೆಂದಿಂತು ಚತುರ್ವಿಧಮಪ್ಪುಪಸರ್ಗಮುಮಂ ಪಸಿವು ನೀರಟ್ಕೆ ಮೊದಲಾಗೊಡೆಯವಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ವ್ಯಾಧಿ ಗಳಿಂದಪ್ಪ ವೇದನೆಯಂ ಸೈರಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

೧. ಯಂತೆಗೆದು (ಛ). ೨. ಹಮೆಲ್ಲಮಂ (ಘ,ಚ,ಛ). ೩. ದಂ (ಘ,ಛ,), ದುಂ (ಚ), (ಕ,ಖ,ಗ) ಗಳಲ್ಲಿಲ್ಲ. ೪. ಲ್ಲದೆ (ಘ,ಚ,ಛ) ೫. ಮಿರುಳಿಂ (ಘ,ಚ). * ಇದು (ಘ,ಚ,ಛ) ಗಳಲ್ಲಿಲ್ಲ. ೬. + ಸಮ್ಯಗ್‌ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘ,ಚ,ಛ). ೭. ದಿಂದಷ್ಟವಿಧ (ಘ,ಚ,ಛ,).

# (೧೦) ವೃಷಭಸೇನ ಭಟ್ಟಾರರ ಕಥೆ

ವೃಷಭಸೇನ ಭಟಾರರ ಕಥೆಯಂ ಪೇೞ್ವೆಂ :

**ಗಾಹೆ ॥** ಉಣ್ಹಂ ವಾದಂ ಉಣ್ಹಂ ಸಿಳಾತಳಂ ಆದವಂ ಚ ಅತಿ ಉಣ್ಹಂ ।
ಸಹಿಊಣ ಉಸಹಸೇಣೋ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಉಣ್ಹಂ ವಾದಂ – ಬಿಸಿದಪ್ಪ ಗಾಳಿಯುಮಂ, ಉಣ್ಹಂ – ಬಿಸಿದಪ್ಪುದಂ, ಸಿಳಾತಳಂ–[೧]ಯೋಗಪೀಠದ[೧] ಸಿಲೆಯ ಮೇಗುಮಂ, ಆದವಂ ಚ – ಬಿಸಿಲುಮಂ, ಅತಿ ಉಣ್ಹಂ – ಆದಂ ಬಿಸಿದಪ್ಪುದಂ, ಸಹಿಊಣ – ಲೇಸಾಗಿ ಸೈರಿಸಿ, ಉಸಹಸೇಣೊ – ವೃಷಭಸೇನರೆಂಬ ಮುನಿ, ಪಡಿವಣ್ಣೋ – ಪೊ[೨]ರ್ದಿ[೨]ದೊಂ, ಉತ್ತಮಂ ಅಟ್ಠಂ – ಮಿಕ್ಕದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳವಂತಿಯೆಂಬುದು ನಾಡಲ್ಲಿ ಉಜ್ಜೇನಿಯೆಂಬುದು ಪೊೞಲದನಾಳ್ವೊಂ ಪ್ರದ್ಯೋತನೆಂಬರಸನಾತನ ಮಹಾದೇವಿ ಜ್ಯೋತಿರ್ಮಾಲೆಯೆಂಬೊಳಂತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ ಕಾಡಾನೆಯಂ ಪಿಡಿಯಲ್ವೇಡಿ[೩]ಯಾ[೩]ನೆಯ ನೇಱಿ ಅಡವಿಗೆವೋದೊಡದು ಮದವಿಹ್ವಳಿತನಾಗಿ ಮೆಯ್ಯಱಿಯದೆ ದಿಶಾಪಟ್ಟಂಗೊಂ[೪]ಡೊಂ[೪]ದೆಸೆಗೆ ಕೊಂಡೋಡಿ[೫]ದಂಡಕಾ[೫]ರಣ್ಯ[೬]ಮಪ್ಪ[೬]ಡವಿಯ ನಡುವೆ[೭]ತನ್ನ ಬೇಗದಿಂ[೭] ಪರಿಯೆ ನಾಡೆಯಂತರಂಬೋದೊಡೊಂದು ಮರದಡ್ಡ[೮]ಬಿ[೮]ರ್ದ ಕೊಂಬಂ ಕಂಡರಸಂ ಪಿಡಿದು [೯]ನೇ[೯]ಲ್ದಿರ್ದೊಡಾನೆಯುಂ ಪೆಱತೊಂದು ದೆಸೆಗೆ ವೋ[೧೦]ಯ್ತಂತ[೧೦]ರಸನುಂ ಮರದಿಂದಿೞಿದು ನಾಡ ಬಟ್ಟೆಯೊಳ್ ತಗುಳ್ದು ಅಡವಿಯಂ ಪೊಱಮಟ್ಟು ಬಂದೊಂದು ಖೇಡಮೆಂಬೂರನೆಯ್ದಿಯದಱ ಸಾರೆಯೊಂದು ಕೆಯ್ಯುಂ[೧೧]ಟದಱ ಸಾರೆಯೊಳ್ ಬಾವಿಯುಂ[೧೧]ಟದಱ ತಡಿಯೊಳ್ ಬಂದು ಕುಳ್ಳಿರ್ದು ಪಸಿವಿನಿಂದಂ ತೃಷೆಯಿಂದಂ[೧೨]ಪಥ[೧೨]ಶ್ರಮದಿಂದಾದಮಾನುಂ ಸೇದೆಗೆಟ್ಟು ಬಂಬಳಂ ಬಾಡಿರ್ಪನ್ನೆಗಮ್

ಆವೂರ ಗಾವುಂಡಂ ಜಿನವಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳಾಯಿರ್ವರ್ಗ್ಗಂ ಮಗಳ್ ಜಿನದತ್ತೆಯೆಂಬೊಳತ್ಯಂತ ರೂಪಲಾವಣ್ಯ ಸೌಭಾಗ್ಯ ಕಾಂತಿ[೧೩]ಯು[೧೩]ಮೆಂದಿವನೊಡೆಯೊಳ್ ನೀರಂ ತರಲ್ಕೆಂದು ಬಾವಿಗೆ ವೋ[೧೪]ದಾ[೧೪]ಕೆಯು[೧೫]ಂ ಕಂಡರಸನೆಲೆ[೧೫] ಕೂಸೆ ನೀ[೧೬]ರಂ ಕು[೧೬]ಡಿ[೧೭]ಯಲೆಱೆಯಾ ಎಂದೊಡಂತೆಗೆಯ್ವೆನೆಂದಾತನ ರೂಪುಂ ಗಾಡಿಯುಂ ತೇಜಮುಂ ಲಾವಣ್ಯಮುಮಂ ಕಂಡಾಟಿಸಿ ನೀರಂ ಸೇದಿಕೊಂಡು ಬಂದು[೧೭] ಕುಡಿಯಲೆಱೆಯ

೧. (ಘ,ಚ,ಛ) ಗಳಲ್ಲಿಲ್ಲ. ೨. ರ್ದಿ (ಕ,ಖ,ಗ). ೩. ಸೊರ್ಕಾ (ಘ,ಚ,ಛ). ೪. ಡೊಂದು (ಕ,ಖ,ಗ) ೫. ದೊಡದು ಅ (ಖ). ೬. ಮೆಂಬ (ಘ,ಚ,ಛ). ೭. (ಘ,ಚ,ಛ) ಗಳಲ್ಲಿಲ್ಲ. ೮. ವಿ (ಘ,ಚ), ಮಿ (ಛ). ೯. ನಿ (ಖ,ಚ), ೧೦. ದಡಂ ಅ (ಕ,ಗ), ದಡಂತ (ಖ). ೧೧. ಬಾವಿಯುಮುಂ (ಘ,ಚ), ಬಾವಿಯುಮೆಂಬುದುಂ (ಛ). ೧೨. ಬಟ್ಟೆಯ (ಘ,ಚ), (ಛ) ದಲ್ಲಿಲ್ಲ. ೧೩. ಯೌವನ (ಘ,ಚ,ಛ). ೧೪. ದಡಾ (ಕ,ಗ), ದೊಡಾ (ಖ). ೧೫. ನರಸಂ ಕಂಡೇಂ (ಘ,ಚ,ಛ). ೧೬. ರ್ಗು (ಘ,ಚ,ಛ). ೧೭. (ಕ,ಖ,ಗ) ಗಳಲ್ಲಿಲ್ಲ.

ಕುಡಿಯೆ [೧]ಕು[೧]ಡಿಯೆ ಕರಗದ ದಾರೆಯನು[೨]ಗಿದುಕೊಂಡೊಡ[೨]ರಸನಾಕೆಯ ಮೊಗಮಂ ನೋಡಿ ನಕ್ಕೇಕೆ ಕಾಡುವೌ ಕೂಸೆ ಕಾಡದೆ ಕುಡಿಯಲೆಱೆಯಾ ಎಂದೊಡಾಕೆಯುಂ ಕುಡಿಯಲ್ಕೆಱೆದು ತನ್ನ ಮನೆಗೆವೋಗಿ ತನ್ನ ತಂದೆಗಿಂತೆಂದಳಮ್ಮಾ ಊರ ಪೊಱಗಣ ಬಾವಿಯೊಳೊರ್ವಂ ಮಹಾಪುರುಷಂ ಬಂದಿ[೩]ರ್ದೊ[೩]ನಾತನಂ ನೀಮೊಡಗೊಂಡು ಮನೆಗೆ ಬನ್ನಿಮೆಂದೊಡಂತೆಗೆಯ್ವೆನೆಂದಾತನುಂ ಪೋಗಿಯೊಡಗೊಂಡು ಬಂದಾತನ ಶ್ರಮಂ ಪೋಗೆ ದಿವ್ಯಮಪ್ಪಾಹಾರಮನೂಡಿ[೪]ರ್ದ[೪]ನ್

ಅನ್ನೆಗಮರಸನ[೫]ಡಿವಜ್ಜೆಯಂ ನೋಡುತ್ತಂ ಪೆಱಗಣಿಂದಂ ತಂತ್ರಮೆಲ್ಲಂ ಬಂದರಸನಿಲ್ಲಿಗೆ ವಂದೊನೆಯೆಂದೂರೊಳಗೆಲ್ಲಮುಱಿಸಿ ಬೆಸಗೊಂಡವರರಸನಂ ಕಂಡೆಱಗಿ ಪೊಡೆವಡುವುದುಮಂ ಜೀಯ ಮಹಾಪ್ರಸಾದಮೆಂಬುದುಮಂ ಗಾವುಂಡಂ ಕಂಡೆಲೆ ಈತನರಸನೆಂದಱೆದಗ್ಗಳಂ ಪ್ರತಿಪತ್ತಿಯುಂ ಗೌರವಮುಮಂ ಮಾಡಿದೊಡರಸಂ ತನ್ನ ಪೆರ್ಗಡೆಗಳಿಂದಂ ಕೂಸಂ ಬೇಡಿ ಪೆತ್ತು ಮದುವೆನಿಂದಾಕೆಗೆ ಮಹಾದೇವಿವಟ್ಟಂಗಟ್ಟಿ ತನ್ನ ಪೊಟಲ್ಗೆ ವೋಗಿ ಕರುಮಾಡಮಂ ಬಳಸಿಯುಮಿರ್ದಂತಃಪುರದೊಳಗೊಂದೊಳ್ಳಿತಪ್ಪ ಮಾಡಮಂ ಕೊಟ್ಟರಿಸಿ ಎಲ್ಲಾ ಅರಸಿಯರ್ಕಳುಮನುಱಿದು ಜಿನದತ್ತೆಗಾಸಕ್ತನಾಗಿ ಪಲಕಾಲಮಾಕೆಯೊಳಿಷ್ಟ ವಿಷಯಕಾಮಭೋಗಂಗಳನನುಭವಿಸುತ್ತಿರ್ಪನ್ನೆಗಮೊಂದು ದಿವಸಮಡವಿಯ ಸೊರ್ಕಿದಾನೆ[೬]ಗಣಿಯಾನೆ[೬]ಗಳ್ವೆರಸು ಬಂದು [೭]ಬಾವಿ[೭]ಯಂ ಪೊಕ್ಕೊಡೆ ಪಿರಿದುಂ ಕಳಕಳಮಾಗಿ ಅರಸಂಗಱಿಪಿದೊಡರಸನುಂ ಕೇಳ್ದು ತುರಿಪದಿಂ ಪೊಱಮಟ್ಟು ಕಾಡಾನೆಯಂ ಕಟ್ಟಿಸಲೆಂದು [೭]ಬಾವಿ[೭]ಗೆ ವೋದೊನಾ ಪ್ರಸ್ತಾವದೊಳ್ ಜಿನದತ್ತೆ ಪಸದನಂ[೮]ಗೊಂಡಿ[೮]ರ್ದಾಕೆ ಎನ್ನಂ ಬಿಸುಟ್ಟರಸಂ ಪೋದೊನೆಂದು ಮುಳಿದು ನುಡಿವುದುಮರಸನಾಕೆಯನೊಡಗೊಂಡು ಪೋಗದುದಂ ಕಂಡರಸಿಯರ್ಕಳೆಲ್ಲಂ ಸಂತೋಸಮಾಗಿ ಇನ್ನೆಮುಗಮರಸಂ [೯]ಸೂಱುಂ ಪಾಱಿಯು[೯]ಮನೀಗುಮೆಂದು ರಾಗಿಸಿ ನುಡಿವ ಮಾತುಗಳಂ ಜಿನದತ್ತೆ ಕೇಳ್ದು ಕಿನಿಸಿ [೧೦]ಇನ್ನಾತ[೧೦]ನೆನಗೆ ಬಾೞ್ತಿಯ[೧೧]ಲ್ಲನೆಂ[೧೧]ದು ತನ್ನ ಮಾಡದಿಂ ಪೊಱಮಟ್ಟು ಪೆಱತೊಂದು ಪ್ರಾಸಾದದೊಳ್ ಪೋಗಿ[೧೨]ರ್ದೊ[೧೨]ಳ್

ಅನ್ನೆಗಮಿತ್ತರಸನಾನೆಯಂ ಕಟ್ಟಿಸಿ ಜಿನದತ್ತೆಯ ಮಾಡಕ್ಕೆ ವೋಗಿ ಅರಸಿಯಂ ಕಾಣದೆಲ್ಲಿರ್ದಳೆಂದು ಬೆಸಗೊಂಡೊಡೊರ್ವನಿಂತೆಂದಂ ನೀಮೊಡಗೊಂಡು ಪೋದಿರಿಲ್ಲೆಂದರಸಿ ಮುಳಿದು ಪುರುಷ ವ್ರತಮಂ [೧೩]ಕೊಂಡು ತಪಸ್ವಿನಿಯಾಗಿ ಪೆಱತೊಂದು ಮಾಡದೊಳಿರ್ದೊಳೆಂದು ಪೇೞ್ದೊಡಾ ಮಾತನರಸಂ ಕೇಳ್ದಾದಮಾನುಂ ಮುಳಿದಿಂತಪ್ಪ ವ್ರತಮುಂ ತಪಮುಮೆನ್ನಲ್ಲಿ ಕೂಡದೆಂದು ನುಡಿದಾಕೆಯಂ ಬೆಳ್ಕಾಡೊಳ್ ಮಸಣದೊಳ್ ಕೊಂಡುಪೋಗಿಕ್ಕಿಮೆಂದಾಳ್ಗಳ್ಗೆ ಬೆಸನಂ

---

೧. ಗು (ಘ,ಚ,ಛ). ೨. ಡುಗಿದಾಗಳ (ಘ,ಚ,ಛ). ೩. ರ್ದೊ (ಖ). ೪. ಯಿರ್ದ (ಖ). ೫. + ಪೋದ (ಘ,ಚ,ಛ). ೬. ಗಳು ಕರಿಣಿ (ಘ,ಚ,ಛ). ೭. 'ಬಾರಿ' ಎಂದಿರಬಹುದೆ? ೮. ಗೊಳುತ್ತಿ (ಘ,ಚ,ಛ). ೯. ಸೂಳುಂಪಾಳಯುಂ (ಕ,ಗ), ಸೂಳುಂ ಪಾಳೆಯು (ಖ), ಸೂಳು ಪಾಳಿಯ (ಘ,ಚ,ಛ). ೧೦. ತಾ (ಘ,ಚ,ಛ). ೧೧. ಲ್ಲೆಂ (ಘ,ಚ,ಛ). ೧೨. ರ್ದೊ (ಖ). ೧೩. + ಕೈ (ಘ,ಚ,ಛ).

ಪೇೞ್ದೊಡವರುಮಂತೆ ಗೆಯ್ವೆಮೆಂದರಸಿಯನೊಡಗೊಂಡುಪೋಗಿ ಮಸಣದೊಳೊಂಬತ್ತು ತಿಂಗಳ ಗರ್ಭಿಣಿಯಂ ಪೊ[೧]ತ್ತು[೧] ಪೋಗಿಯಾಕೆಯನಲ್ಲಿಕ್ಕಿ ಇಂತೆಂದರಬ್ಬಾ ಎಮಗೇನುಂ ದೋಷ[೨]ಮುಂ ಪಾಪಮು[೨]ಮಿಲ್ಲ ಕ್ಷಮಿಯಿಸಿಮರಸನ ಬೆಸದೊಳ್ ತಂದಿಕ್ಕಿದೆಮೆಂದು ನುಡಿದು ಪೋದರನ್ನೆಗಮಾ ಇರುಳೊಳರಸಿ ಬೆಸಲೆಯಾಗಿ ಮಗನಂ ಪೆತ್ತೊಳ್ .

ಇತ್ತರಸನುಮಾ ಇರುಳೊಳ್ ಶ್ವೇತವೃಷಭನಂ ಕನಸಿನೊಳ್ ಕಂಡು ಪೊಟ್ಟಿ[೩]ಱ[೩]ನೋಲಗ[೪]ದೊಳ್ ಆಸ್ಥಾನದ[೪] ನಡುವೆ ಸಿಂಹಾಸನಮಸ್ತಕಸ್ಥಿತನಾಗಿ ತನ್ನ ಕಂಡ ಕನಸಂ ಮಂತ್ರಿಗೆ ಪೇೞ್ದೊಡೆ ಮಂತ್ರಿಯುಮಿಂತೆಂದು ಕನಸಿನ ಫಲಮನರಸಂಗೆ ಪೇೞ್ದಂ ದೇವಾ ನಿಮಗಿಂದು ಪುತ್ರಲಾಭಮಾದುದೆಂದು ಪೇೞ್ದೊಡದಂ ಕೇಳ್ದರಸಿಯರ್ಕಳೊ[೫]ಳಗಾರ್ವ್ವೆ[೫]ಸಲೆಯಾಗಿ ಮಗನಂ ಪೆತ್ತ[೬]ಳೆಂದಾ[೬]ರಯ್ದು ಬನ್ನಿಮೆಂದು ಪಡಿಯಱರ್ಗೆ ಬೆಸವೇೞ್ದೊಡವರ್ ರಾಣಿ[೭]ವಾಸಕ್ಕೆ ಪೋಗಿ ಅರಸಿಯರ್ಕಳೆಲ್ಲರುಮಂ ಬೇಱೆವೇಱೆ ನಿಮ[೮]ಗಂ[೮] ಪುಟ್ಟಿದನೆ ಎಂದು ಬೆಸಗೊಂಡೊಡವರ್ಗಳನಿಬರುಮಿಂತೆಂದರೆಮಗೆ ಸೌಭಾಗ್ಯಮಿಲ್ಲದವರ್ಗೆ ಭರ್ತಾರನ ದೆಸೆಯಿಂದಪ್ಪ ಸೂೞುಂ ಪಾೞಿಯುಮಿಲ್ಲದೊರ್ಗೆ ಬಸಿಱುಂ ಮಗನುಮೆಂತಕ್ಕುಂ ನೀಮಾರಾನುಂ ಸೌಭಾಗ್ಯಮುಳ್ಳೊರಲ್ಲಿ ಬಸಿಱುಂ ಮಗನುಮನಾರಯ್ವಿಮೆಮ್ಮಲ್ಲಿ ಏನನಾರಯ್ವಿರೆಂದು ನುಡಿದೊಡವರ್ಗ್ಗಳುಂ ಶ್ಮಶಾನಕ್ಕೆ ಪೋಗಿ ಜಿನದತ್ತೆ ಬೆಸಲೆಯಾಗಿ ಮಗನಂ ಪೆತ್ತಿರ್ದೊಳಂ ಕಂಡರಸಂಗೆ ಪೋಗಿ ಇಂತೆಂದರ್ ದೇವಾ ಶ್ಮಶಾನದೊಳ್ ಜಿನದ[೯]ತ್ತೆಯರಸಿ[೯] ಬೆಸಲೆಯಾಗಿ ಮಗನಂ ಪೆತ್ತಿರ್ದ[೧೦]ಳೆಂ[೧೦]ದು ಪೇೞ್ದೊಡದಂ ಕೇಳ್ದರಸಂ ಕೂಸುಮನರಸಿಯುಮನೊಡಗೊಂಡು ಬನ್ನಿಮೆಂದು ತರಿಸಿ ಮುನ್ನಿ[೧೧]ನಂದ[೧೧]ದೊಳಿರಿಸಿ ಕನಸಿನೊಳ್ ವೃಷಭನಂ ಕಂಡುದಱಿಂದಾ ಕೂಸಿಂಗೆ ವೃಷಭಸೇನನೆಂದು ಪೆಸರನಿಟ್ಟರಸಿಯಂ ದಾನಸನ್ಮಾನಾದಿಗಳಿಂ ಪೂಜಿಸಿಯಾಕೆಯೊಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಮಿರೆ

ವೃಷಭಸೇನ ಕುಮಾರನುಮೆಂಟು ವರುಷದ ಪ್ರಾಯದಾತನಾಗಿರ್ಪನ್ನೆಗ[೧೨]ಮೊಂದು ದಿವಸ[೧೨]ಮರಸಂ ತಪಂಬಡುವ ಬಗೆಯಿಂದಂ ವೃಷಭಸೇನ ಕುಮಾರಂ[೧೩]ಗಿಂ[೧೩]ತೆಂದಂ ಮಗನೆ ನಿನಗೆ ಪಟ್ಟಂಗಟ್ಟಲ್ ಬಗೆದ[೧೪]ಪ್ಪೆ[೧೪]ನೆಂದೊಡಾತನಿಂತೆಂ[೧೫]ದನಯ್ಯಾ[೧೫] ಎನಗೆ ನೀ[೧೬]ಮುಂ[೧೬] [೧೭]ರಾಜ್ಯಪಟ್ಟಂಗಟ್ಟಿದ[೧೮]ಪಿ[೧೮]ರೊ ಮೋಕ್ಷಪಟ್ಟಂಗಟ್ಟಿದ[೧೮]ಪಿ[೧೮]ರೊ ಎಂ[೧೯]ದು ತಂದೆಯಂ ಬೆಸಗೊಂಡೊ[೧೯]ಡೆ ಮಗನೆ ನಿನಗೆ ಮನುಷ್ಯರಾಜ್ಯಪಟ್ಟಂಗಟ್ಟಿದಪ್ಪೆ[೨೦]ನೆಂಬುದುಂ[೨೦] ದೇವಾ ರಾಜ್ಯಪಟ್ಟ

---

೧. ಳ್ತು (ಭ). ೨. (ಝ,ಚ,ಭ) ಗಳಲ್ಲಿಲ್ಲ. ೩. ದಿ (ಝ). ೪. ದೊಳಾಸಭೆಯ (ಝ,ಚ), ಸಾಲೆಯ (ಭ). ೫. ಳಾರ್ವ್ವೆ (ಝ), ಳಾರ್ಬೆ (ಭ), ಳೆಲ್ಲರುಮಂ ನೋಡಿಯಾರ್ಬೆ (ಚ). ೬. ರೆಂಬುದನಾ (ಝ,ಚ,ಭ). ೭. + ಯ (ಝ), + ಯಾ (ಭ). ೮. ಗೆ (ಝ), ಗೆಮಗಂ (ಚ,ಭ). ೯. ತ್ತರಸಿಯರ್ (ಝ,ಚ,ಭ). ೧೦. ರೆಂ (ಝ,ಚ,ಭ). ೧೧. ನ ಮಾಡ (ಝ,ಭ). ೧೨. (ಝ,ಚ,ಭ) ಗಳಲ್ಲಿಲ್ಲ. ೧೩. ರನಂ ಕರೆದಿಂ (ಝ,ಚ,ಭ). ೧೪. ಪೆ (ಝ,ಚ,ಭ). ೧೫. ದಂ ದೇವಾ (ಝ,ಚ,ಭ). ೧೬. ವು (ಝ,ಚ,ಭ). ೧೭. + ಮನುಷ್ಯ (ಝ,ಚ,ಭ). ೧೮. ಪ (ಕ,ಗ). ೧೯. ದೊ (ಝ,ಚ,ಭ). ೨೦. (ಝ,ಚ,ಭ) ಗಳಲ್ಲಿಲ್ಲ.

[೧]ಬಂಧನ[೧]ಮುಂ ಮೋಕ್ಷ[೨]ಸುಖ[೨] ರಾಜ್ಯಪಟ್ಟ[೩]ಬಂಧನ[೩]ಮುಮೆಂತೆನೆ [೪]ಮೋಕ್ಷ ಸುಖರಾಜ್ಯಪಟ್ಟಮಮಂ[೪] ತಪಂಗೆಯ್ವೊಂಗೆ ಕಟ್ಟುವುದೆಂದೊಡಂತಪ್ಪೊಡೆ ಮನುಷ್ಯ ರಾಜ್ಯಪಟ್ಟಮನೊಲ್ಲೆನೆನಗೆ ಮೋಕ್ಷರಾಜ್ಯಪಟ್ಟಂಗಟ್ಟೆಮೆಂದು ನುಡಿದೊಡರಸ ನೆಂದಂ ಮಗನೆ ನೀನಿನ್ನುಂ ಕೂಸ[೫]ನೈ ಬಾಲವದ್ದೆ[೫]ಯನ್ನೆಗಂ ಬಳೆದರಸುಗೆ ಯ್ದಿಷ್ಟ ವಿಷಯ ಕಾಮ ಭೋಗಂಗಳನನುಭವಿಸು[೬]ತ್ತಂ[೬] ಬೞಿಕ್ಕೆ ಪಶ್ಚಾತ್ಕಾಲ ದೊಳ್ ತಪಂಬಡುವುದೆಂದೊಡೆ ಕುಮಾರನಿಂತೆಂದನನ್ನೆಗಂ ಸಾವರೊ ಬಾೞ್ವರೊ ಎಂತಱಿಯಲಕ್ಕುಂ ಮನುಷ್ಯರ ಬಾ[೭]ೞ್ಕುಂ[೭]

**ಕಂದ ||** ಪಸಿಪುಲ್ಲ ಮುಗಿಲ ಸಂಜೆಯ
ಕನಸಿನ ಸುರಚಾಪದನುವ ನೆಗೆದ ನೊರೆಗಳ ತೆಱನಂ
ತನಿತುಂಬ ಸಿಲ್ಲವು [೯]ಬಗೆವೊಡೆ
ಮನು[೧೦]ಜ[೧೦]ರ [೧೧]ಯೌವನಮುಮರ್ಥಮುಂ [೧೧]ಬಾೞ್ಕೆಗಳುಂ ||

**ಶ್ಲೋಕ ||** ಭೋಗಸ್ತೃಷ್ಣಾಗ್ನಿ ಸಂವೃದ್ಧ್ಯೈ ದೀಪನೀಯೋ ವನೋಪಮಃ |
ಏಭಿಃ ಸ್ತ್ರೀವೃದ್ಧತೃಷ್ಣಾಗ್ನಿಶಾಂತ್ಯೈ ಚಿಂತ್ಯಮಿಹಾಪರಂ ||

**ಗಾಹೆ ||** ಸಣ್ಣಂ ವಾ ಬದರಂ ತಂ ಮಜ್ಝ ವಿಮುತ್ತಾಣ ಮುತ್ತಿಪಹಂ |
ಅಽವಿಮಿಸಾಽವಮಂ (?) ಭೋಗಸುಹಲೋಹವಿರದೋ ಮೊಕ್ಖೇ ಮದಿಂ ಕುಜ್ಜಾ ||

**ಆರ್ಯೆ ||** ಯದ್ಯಪಿ ನಿಷೇವ್ಯಮಾಣಾ ಮನಸಸ್ಸಂತುಷ್ಟಿಕಾರಕಾ ವಿಷಯಾಃ | ·
ಕಿಂಪಾಕಫಲಾಶನವದ್ಭವಂತಿ ಪಶ್ಚಾದತಿದುರಂತಾಃ ||

ಎಂಬುದಱಿಂ ಭೋಗಂಗ[೧೩]ಳುಂ ಕಿಂಪಾಕಫಳದೊಳೋರನ್ನ[೧೩]ವದು ಕಾರಣದಿಂ ರಾಜ್ಯದೊಳಪ್ಪ ಭೋಗಸುಖಂಗಳನೊಲ್ಲೆಂ ಜಾತಿಜರಾಮರಣಗಳಿಂದ[೧೪]ಪ್ಪ ಬಾಧೆಯಿ[೧೪]ನಗಲ್ದ ಶಾಶ್ವತಮಪ್ಪ ಮೋಕ್ಷಸುಖಮನೆ ಬೇೞ್ಪೆನೆಂದು ತಱಿಸಂದು ನುಡಿದೊಡರಸಂ ಜ್ಯೋತಿರ್ಮಾಲೆಯೆಂಬರಸಿಯ ಮಗಂ ವಸುಪಾಳನೆಂ[೧೫]ಬೊಂಗೆ[೧೫] ರಾಜ್ಯಪಟ್ಟಂಗಟ್ಟೆ ತಂದೆಮಕ್ಕಳಿರ್ವರುಮೆಲ್ಲರೊಳಂ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ಗುಣಧರರೆಂಬಾಚಾರ್ಯರ ಪಕ್ಕದೆ[೧೬]ದೀಕ್ಷೆಯಂ ಕೈಕೊಂಡು[೧೬]ಪನ್ನೆರಡು ವರುಷಂಬರೆಗಂ ಗುರುಗಳನಗಲದಿರ್ದಾಗಮಂಗಳೆಲ್ಲಮಂ ಕಲ್ತು ಭಟಾರರಂ ಬೆಸಗೊಂಡವರನುಮತದಿಂ ವೃಷಭಸೇನಮುನಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬರ್ಪೊರ್ ವತ್ಸೆಯೆಂಬುದು ನಾಡೊಳ್ ಕೌಶಂಬಿಯೆಂಬ ಪೊೞಲ್ಗೆವಂದದಱ ಸಾರೆ

---

೧. ಬೇಡ (ಕ,ಖ,ಗ). ೨. (ಘ,ಚ,ಛ)ಗಳಲ್ಲಿಲ್ಲ. ೩. (ಕ,ಖ,ಗ)ಗಳಲ್ಲಿಲ್ಲ. ೪. (ಕ,ಖ,ಗ)ಗಳಲ್ಲಿಲ್ಲ. ೫. ವೈ ಬಾಳವದ್ದೆ(ಖ), ನೈ ಬಾಲಕನೆ (ಘ,ಚ), ನೆಯುಬ್ಬಾಳಕನೆ (ಛ). ೬. ದಿಂ (ಘ,ಚ,ಛ). ೭. ಳಂ (ಘ,ಚ,ಛ). ೮. ಚಾಪದ ವನದಿ ಲಹರಿಕಾ ನಿಕರದವೊಲೆನಸುಂ (ಘ,ಚ), ಚಾಪದ ವನದಿ ಲಹರಿಕಾನಿಲದವೊಲೆನಸುಂ (ಛ). ೯. (ಕ,ಖ,ಗ)ಗಳಲ್ಲಿಲ್ಲ. ೧೦. ಷ್ಯ (ಖ). ೧೧. ಧನಮುಂ ಯೌವನಮುವಿದ್ಯೆಯುಂ (ಕ,ಗ), ಯೌವನಮು ಅರ್ಥಮುಂ (ಖ), ಜೌವನಮುಮರ್ಥಮುಂ (ಘ,ಚ,ಛ). ೧೨. ವಿಸ್ವಾ (ಕ,ಖ,ಗ). ೧೩. ಳ್ಗಳ್ಕೆ ಕಿಡುಗುಂ ಮೋಕ್ಷಫಲಮೊಳೋರನ್ನವಲ್ಲ (ಘ,ಛ,ಚ). ೧೪. (ಘ,ಚ,ಛ)ಗಳಲ್ಲಿಲ್ಲ. ೧೫. ಒ ಕುಮಾರಂಗೆ (ಕ,ಖ,ಗ). ೧೬. ತಪಂಬಟ್ಟು (ಘ,ಚ,ಛ).

[೧]ಉ[೧]ದಯಾವತ [೨]ಪರ್ವತ[೨]ಮೆಂಬ ಪರ್ವತಮುಂಟದಱ ಮೇಗೆ ವೃಷಭಸೇನ ಭಟಾರ[೩]ರ್ ನಾಲ್ಕು ತಿಂಗಳುಮಾತಪಸ್ಥಿತ[೩]ಯೋಗಮಂ ಕೈಕೊಂಡು ದಿವಸಕ್ಕಂ ಕಲ್ಲಿಲೆನಿಲೆ ಪೊಟಲವರ್ಗಳ್ ಕಂಡನಿಬರುಂ [೪]ಶ್ರಾವಕಭಕ್ತರುಂ[೪] ಬೆಸಕೆಯ್ವರು[೫] ಮಾದರ್

ಮತ್ತಾ ಪೊಟಲೊಳ್ ಬುದ್ಧ[೬]ಜ[೬]ನೆಂಬೊಸುಪಾಸಕನಾತಂ ಋಷಿಯರೊಳಪ್ಪ ಮಾತ್ಸರ್ಯದಿಂ ಕಾರಣಮಾಗಿ ಭಟಾರರ್ ಚರಿಗೆವೋದರನ್ನೆಗಂ ಪಿಂದೆ ಪಾಪ ಕರ್ಮದಿಂ ಯೋಗಶಿಲೆಯ ಮೇಗುಮುಂ ಕೆಲಗುಮಂ ಬಳಸಿಯುಂ ಪಲವುಂ ಪಿರಿ ಯವುಮಪ್ಪ ತಱಿಯ ಪುಳ್ಳಿಗಳಂ ಕಡಿದೊಟ್ಟಿ ಕಿಚ್ಚನಿಕ್ಕಿ ಸುಟ್ಟು ಕಿಚ್ಚಿನ ಬಣ್ಣ ದಂತಾಗಿ ಸಿಲೆಯಂ ಮಾಡಿ ಕೆಂಡಂಗಳನೊಂದು ಕೆಲಂ ಸಾರ್ಚಿ ಪೋದನನ್ನೆಗಂ ಭಟಾರರ್ ಚರಿಗೆ ವೋಗಿ ಬರ್ಪೋರ್ ಧಗದ್ಧಗಿಸುತ್ತಿರ್ದ ಕಿಚ್ಚಿನ ಬಣ್ಣದಂತಪ್ಪ ಕೆಚ್ಚನಾಗಿ[೭]ರ್ದ[೭] ಸಿಲೆಯಂ ಕಂಡೆಮಗಿನಿತೆಯಾಯುಷ್ಯಮೆಂದಱಿದು ಕ್ರಿಯೆಗೆಯ್ದು ಚತುರ್ವಿಧಮಪ್ಪಾಹಾರಮುಂ ಶರೀರಮುಮಂ ಜಾವಜ್ಜೀವಂ ತೊಱೆದು ಕಾಯ್ದಿರ್ದ ಯೋಗಪೀಠಮನೇಱಿ[೮] ಕಾಯೋತ್ಸರ್ಗದಿಂ ಗೆಯ್ದು ಜ್ಯೇಷ್ಠ ಮಾಸದ ಬಿಸಿಲುಂ ಝಳಮುಂ ಬೆಂಕೆಯುಂ ಕಿಚ್ಚುಮಂ ಸೈರಿಸಿ ನೀರೊಳಗಿರ್಩ತಿರ್ದು ಶುಕ್ಲಧ್ಯಾನ ಮಂ ಧ್ಯಾನಿಸಿ ಎಂಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್ [೯]ಮತ್ತೆ ಪ್ರದ್ಯೋತನೆಂಬ ಋಷಿ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗ ದೊಳ್ ಪುಟ್ಟಿದರ್[೯]

ಮತ್ತಂ ಪೆಱರುಮಾರಾನುಂ ಸಹಜರತ್ನತ್ರಯಮನಾರಾಧಿಸುತ್ತಿರ್ದ್ದ ಭವ್ಯ ರ್ಗಳ್ ವೃಷಭಸೇನ ಭಟಾರರಂ ಮನದೊಳ್ ಬಗೆದು ಝಳಮುಂ ಬೆಂಕೆಯುಮಂ ದಾಹಮುಷ್ಣಮುಂ ಶೀತಮುಂ ವಾತಮುಂ [೧೦]ಬೇ[೧೦]ನೆಯುಂ ಪಸಿವುಂ ನೀರಟ್ಟೆ ಮೊದಲಾಗೊಡೆಯವಿಪ್ಪತ್ತೆರಡು ಪರೀಷಹಂಗಳಂ ಸೈರಿಸಿ ಶುಭಪರಿಣಾಮದಿಂ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸ್ವರ್ಗಾಪವರ್ಗಸುಖಂಗಳ ನೆಯ್ದುಗೆ

---

೧, ೨. (ಘ,ಚ,ಛ)ಗಳಲ್ಲಿಲ್ಲ. ೩. ರ್ ನಾಲ್ಕು ತಿಂಗಳುಮಾತಾಪನಸ್ಥಿತ (ಕ,ಖ,ಗ), ರಾತ ಪಸ್ಥಿರ (ಘ,ಛ). ೪. (ಘ,ಚ,ಛ)ಗಳಲ್ಲಿಲ್ಲ. ೫. +ಂ ಶ್ರಾವಕರು (ಘ,ಚ,ಛ). ೬. ಜನ (ಘ,ಚ,ಛ). ೭. ರ್ದ (ಖ). ೮. + ಸಮ್ಯಗ್ದರ್ಶನಜ್ಞಾನಚಾರಿತ್ರಂಗಳಂ ಸಾಧಿಸಿ (ಘ,ಚ,ಛ). ೯. (ಕ,ಖ,ಗ)ಗಳಲ್ಲಿಲ್ಲ. ೧೦. ವೇದ (ಘ,ಚ,ಛ).

## (೧೧) ಕಾರ್ತಿಕ ಋಷಿಯ ಕಥೆ

ಅಗ್ನಿರಾಜನ ಮಗನಪ್ಪ ಸ್ವಾಮಿ ಕಾರ್ತಿಕ ಋಷಿಯ ಕಥೆಯಂ ಪೇೞ್ವೆಂ :

**ಗಾಹೆ||** [೧]ರೋಹೇದಯಮ್ಮಿ[೧] ಸತ್ತೀಎ ಹದೋ ಕೊಂಚೇಣ ಅಗ್ಗಿದಯಿದೋ ವಿ |
ತವ್ವೇದಣಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ||

[[೧]ರೋಹೇದಯಮ್ಮಿ[೧]–*ರೋಹೇ*ದಕಮೆಂಬ ಪೊೞಲೊಳ್, ಸತ್ತೀಎ ಹದೋ–ಶಕ್ತಿಯೆಂಬಾಯುಧದಿಂದಿಱಿಯೆ ಪಟ್ಟೊನಾಗಿ, ಕೊಂಚೇಣ–ಕ್ರೌಂಚನೆಂಬರಸಿನಿಂದಂ, ಅಗ್ಗಿದಯಿದೋ ವಿ–ಅಗ್ನಿರಾ[೨]ಜನ ಕಾದಲಿಸೆ[೨]ಪಡುವ ಮಗಂ, ತವ್ವೇದಣಂ–ಆ ವೇದನೆಯಂ, ಅಧಿಯಾಸಿಯ–ಲೇಸಾಗಿ ಸೈರಿಸಿ, ಪಡಿವಣ್ಣೋ–ಪೊ[೩]ರ್ದಿ[೩]ದೊಂ, ಉತ್ತಮಂ ಅಟ್ಠಂ – ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಲಾಳವಿಷಯದೊಳ್ ಕೃತ್ತಿಕಾಪುರಮೆಂಬುದು ಪೊೞಲದನಾಳ್ವೊನಗ್ನಿರಾಜನೆಂಬರಸನಾತನ ಮಹಾದೇವಿ ವೀರಮತಿಯೆಂಬೊಳಾಯಿರ್ವರ್ಗ್ಗಂ ಮಕ್ಕಳ್ ಬಂಧುಮತಿ, ಶಿವಸೇನೆ ಶ್ರೀಮತಿ ಸ್ವಯಂಪ್ರಭೆ ಲಕ್ಷ್ಮೀಮತಿ ಕೃತ್ತಿಕೆಯೆಂದಿಂತಱುವರ್ ಪೆಣ್ಗೂಸುಗಳಂತವರ್ಗ್ಗಳಿಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಂ ಫಾಲ್ಗುಣ ಮಾಸದ ನಂದೀಶ್ವರದಂದಱುವರುಂ ಕೊಡಗೂಸುಗಳುಪವಾಸಂಗೆಯ್ದು ಬಸದಿಗರ್ಚನೆಯಂ ಕೊಂಡುಪೋಗಿ ದೇವರನರ್ಚಿಸಿ ನಂದೀಶ್ವರಂಗೆಯ್ದು ಬಂದಿಸಿ ರಿಸಿಯರ್ಕಳುಮಂ ಗುರುಪರಿವಿಡಿಯಿಂ ವಂದಿಸಿ ವ್ರತಂಗಳನೇಱಿಸಿಕೊಂಡು ಸಿದ್ಧಶೇಷೆಯಂ ಕೊಂಡುಬಂದು ತಾಯ್ಗಂ ತಂದೆಗಂ ಕೊಟ್ಟು ಪೋಪಾಗಳರಸಂ ಕಿಱಿಯ ಮಗಳಪ್ಪ ಕೃತ್ತಿಕೆಯ ರೂಪುಂ ತೇಜಮುಂ ಗಾಡಿಯುಮಂ ಕಂಡಾ[೪]ಕೆಗಾಟಿಸಿ[೪] ಸಾಮಂತ ಮಹಾಸಾಮಂತರ್ಕ್ಕಳ್ಗಂ ಪರಿವಾರಕ್ಕಂ ಮಂತ್ರಿವರ್ಗಕ್ಕಂ ವೀರಮತಿ ಮಹಾದೇವಿಗಮೆಲ್ಲ ಸಮು[೫]ಯಿ[೫]ಗಳ್ಗಂ ಬೞಿಯಟ್ಟಿ ಬರಿಸಿಯರಸನಿಂತೆಂದನೆನ್ನಾಳ್ವ ಮಂಡಳಂಗಳೊಳ್ ಪುಟ್ಟಿ[೬]ದ ಲೇಸ[೬]ಪ್ಪ ವಸ್ತುವಾರ್ಗಕ್ಕುಮೆಂದು ಬೇಱೆ[೭]ವೇ[೭]ಱೆಯರಸನ[೭]ನಿಬರುಮಂ ಬೆಸಗೊಂಡೊಡವರ್ಗ್ಗಳೆಲ್ಲಮಿಂತೆಂದರೊಳ್ಳಿತಪ್ಪಾನೆಯುಂ ಕುದುರೆಯುಂ ಮುತ್ತುಂ ಮಾಣಿಕಮುಂ ಸ್ತ್ರೀರತ್ನಮುಂ ಮೊದಲಾಗೊಳ್ಳಿತಪ್ಪುಗ್ಗಳ ವಸ್ತುವೆಲ್ಲಂ ಪೃಥ್ವಿಯನಾಳ್ವೊಂಗಕ್ಕುಮೆಂದು ಪೇೞ್ದೊಡರಸಂ

---

೧. ಮಹೋದಕಂ ಹಿ (ಕ,ಖ,ಗ). *ಮಹೋ (ಕ,ಗ), ಮಾಹೋ (ಖ). ೨. ಜನ ಕಾಲದಲ್ಲಿಸೆ (ಕ,ಗ), ಜನಕಾಲದಲ್ಲಿರಿಸೆ (ಖ). ಜಂ ಕಾದಲಿಸೆ (ಘ,ಚ,ಛ). ೩. ರ್ದ್ದಿ (ಕ,ಖ,ಗ). ೪. ಕೂಸಿಗೆ (ಖ). ೫. ಯಂ (ಖ). ೬. ದೊಳ್ಳಿತ (ಘ,ಚ,ಛ). ೭. ಱ (ಘ,ಚ,ಛ).

ಋಷಿಯರುಮಂ ಬೆಸಗೊಂಡೊಡೆ ಋಷಿಯರೆಂದ[೧]ರಾ[೧]ವ ವಸ್ತು [೨]ಪೇೞಿಂ[೨] ಪೇೞ್ದೊಡೆ ತಕ್ಕು[೩]ದು ತಗ[೩]ದುದುಮನಱಿಯಲಕ್ಕುಮೆಂದೊಡರಸನಿಂತೆಂದನಿವರೆಲ್ಲ[೪]ರ[೪] ಪೇ[೫]ಳ್ವಂತು ಪೇಳ್ವರಲ್ಲರೊ[೫]ಡಂಬ[೬]ಡುವರಲ್ಲ[೬]ರ್ ಬಹು ಪ್ರಳಾಪಿಗಳಿವರಂ ಪೊಱಲಿಂದ[೭]ಟ್ಟಿ ಕಳೆಯಿಮೆಂದಟ್ಟಿ ಕಳೆದುೞಿದರೆಲ್ಲರುಮಂ ಬೆಸಗೊಂಡೊಡನಿಬರುಮೊಡಂಬಟ್ಟೊಳ್ಳಿತ್ತಪ್ಪ ವಸ್ತು ನಿನಗಕ್ಕುಮೆಂದೊಡೆ ಅರಸನೆನಗಕ್ಕುಂ ಬಲಮೆಂದು ಮೂಱು ಸೂಳ್ವರಂ ಸಾಱಿ ನುಡಿದೊಡಂಬಡಿಸಿ ವೀರಮತಿ ಮಹಾದೇವಿಯಂ ಬೇಡಿ ಕೃತ್ತಿಕೆಯಪ್ಪ ಕಿಱಿಯ ಮಗಳಂ ಮದುವೆನಿಂದೊನಾ ದಿವಸಮೆ ವೀರಮತಿ ಮಹಾದೇವಿಯುಂ ಬ್ರಹ್ಮಚರ್ಯ ವ್ರತಮಂ ಕೈಕೊಂಡು ನೆಗೞ್ದಳ್

ಮತ್ತೆ ಕೃತ್ತಿಕೆಗೆ ನವಮಾಸಂ ಗರ್ಭ[೮]ಮಾ[೮]ದಂದು [೯]ಸರವಣ[೯]ಮೆಂಬುದ್ಯಾನ ವನದೊಳಗಣ [೧೦]ಸರವಣ[೧೦]ಮೆಂಬ ಬಾವಿಯೊಳ್ ಜಲಕ್ರೀಡೆಯಾಡಲ್ ಬಯಕೆಯಾದುದೆಂದರಸಂಗಱಿಪಿದೊಡರಸನನುಮತದಿಂ ಜಲಕ್ರೀಡೆಯಾಡಿ ಮಗನಂ ಪೆತ್ತೊಡಾತಂಗೆ ಸ್ವಾಮಿ ಕಾರ್ತ್ತಿಕನೆಂದು ಪೆಸರನಿಟ್ಟರ್ ಮತ್ತಾತನಿಂ ಬೞಿಯಂ ಪೆಣ್ಗೂಸುಮಂ [೧೧]ಪೆತ್ತೊಡೆ[೧೧] ಆಕೆಗೆ ವೀರ[೧೨]ಶ್ರೀ[೧೨]ಯೆಂದು ಪೆಸರನಿಟ್ಟು ಬಳೆದೊಡಾಕೆಯಂ [೧೩]ಕೊಗ[೧೩]ಳಿಯನಾಳ್ವ ಕ್ರೌಂಚನೆಂಬರಸಂಗೆ ಕೊಟ್ಟರಿಂತು ಕಾಲಂ ಸಲೆ [೧೪]ಮತ್ತಿತ್ತ ನಮಿ[೧೪] ಮೊದಲಾಗೊಡೆಯ ತಮ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತ್ತಿಕಂ ಬಳೆದು ಪದಿನಾಱು ವರುಷದ ಪ್ರಾಯಮಾದಂದು ಮತ್ತೊಂದು ದಿವಸಮನಿಬರುಂ ಕುಮಾರರ್ಕಳುದ್ಯಾನ ವನಕ್ಕೆ ವನಕ್ರೀಡೆಯಾಡಲ್ ಪೋಗಿಯಾಡುತ್ತಿರ್ಪನ್ನೆಗಮೆಲ್ಲಾ ಕುಮಾರರ್ಕಳ್ಗಂ ತಾಯ್ ತಂದೆಯಜ್ಜರ್ಕಳ ಮನೆಯಿಂದಂ ಪೂಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂ[೧೫]ಬ[೧೫]ಡಂಗಳುಂ ಬಂದುವು ಸ್ವಾಮಿ ಕಾರ್ತ್ತಿಕಂಗಾರುಮಟ್ಟದಿರ್ದೊಡೆ ಮನದೊಳ್ ಬೞ್ದಿ[ರ್ದಿ]ದೊನಾಗಿ ವನಕ್ರೀಡೆಯನಾಡಿ : ಮನೆಗೆ ವಂದು ತಾಯನಿಂತೆಂದನಬ್ಬಾ ನಿಮ್ಮ ತಂದೆಯಪ್ಪೆಮ್ಮಜ್ಜನೊಳನೊ ಇಲ್ಲೆಯೊ ಎಂದು ಬೆಸಗೊಂಡೊಡೆ ತಾಯ್ ಮನದೊಳ್ ಬೞ್ದಿ[ರ್ದಿ]ದೊಳಾಗಿ ಏನಂ ಪೇೞ್ವೆಂ ಮಗನೆ ನಿನಗೆ ತಂದೆಯಪ್ಪಾತನೆನಗಂ ತಂದೆಯೆಂದು ಪೇೞ್ದೊಡದಂ ಕೇಳ್ದು [೧೬]ಅದುವೆ[೧೬] ವೈರಾಗ್ಯ ಕಾರಣಮಾಗಿ ಶ್ರೀ[೧೭]ವ[೧೭]ರರೆಂಬಾಚಾರ್ಯರ ಪಕ್ಕದೆ ತಪಂಬಟ್ಟಾಗಮಂಗಳೆಲ್ಲಮುಂ ಕಲ್ತು ಗುರುಗಳಂ ಬೆಸಗೊಂಡವರನುಮತದಿಂ[೧೮]ದೇಕ ವಿಹಾರಿಯಾಗಿ[೧೮]ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳಂ ವಿಹಾರಿಸುತ್ತಂ ತೆಂಕನಾಡ ಕಿಷ್ಕಿಂಧಮೆಂಬ[೧೯]ಪರ್ವತ[೧೯]ಮನೆಯ್ದಿಯದಱ ಮೇಗೆ ರಾತ್ರಿ ಪ್ರತಿಮಾಯೋಗಂ [೨೦]ಗೆಯ್ದೊರಾ[೨೦] ಇರುಳ್ ಪಿರಿದೊಂದು ಮೞೆ ಕೊಂಡು

೧. ರದಾ (ಘು,ಚ,ಛ). ೨. ಕೇಳಿಂ (ಖ). ೩. ತಾ (ಖ). ೪. ರ್ (ಘು,ಚ,ಛ). ೫. ಳ್ದಂತೆ ಪೇಳ್ದರಿಲ್ಲೊ (ಘು,ಚ,ಛ). ೬. ಡ (ಖ,ಘು,ಚ,ಛ). ೭. + ಮೆಳ್ಚ (ಘು,ಛ). ೮. ರ್ಭಂ ನೆಱೆ (ಘು,ಛ.) ೯. ಸರವುಣ (ಕ), ಸರವನ (ಘು,ಛ) ಸುರವನ (ಚ). ೧೦. ಶರವೇಣು (ಘು,ಚ,ಛ). ೧೧. ಪೆಳ್ತೊಡೆ (ಕ,ಗ), ಪೊತ್ತೊಳ್ (ಛ). ೧೨. ಸ್ತ್ರೀ (ಕ,ಖ,ಗ). ೧೩. ಕೊಗು (ಘು,ಚ,ಛ). ೧೪. ಮತ್ತಿನವರ್ (ಕ,ಖ,ಗ), ೧೫. ಬಿ (ಖ), ಬಂ (ಚ). ೧೬. ಸಂಸಾರಕ್ಕೆ ಪೇಸಿ (ಘು,ಚ,ಛ). ೧೭. ಧ (ಘು,ಚ). ೧೮. (ಘು,ಚ,ಛ) ಗಳಲ್ಲಿಲ್ಲ. ೧೯. ಪುರ (ಛ). ೨೦. ನಿಂದೊಡಾ (ಘು,ಚ,ಛ).

ಮೆಯ್ಯ ಮಳಮೆಲ್ಲಮುಂ ಕರ್ಚಿ ಕಳೆದು ಪಾಷಾಣಮೆಂಬ ಮಡುವಂ ನೀರ್ ಪೊಕ್ಕಾಗಳಾ ಮಡುವಿನ ನೀರ್ ಸರ್ವೌಷಧಿಯಾದೊಡಂತಲ್ಲಿಯ ನೀರಂ ಮಿಂದವರ್ಗ್ಗೆಲ್ಲಾ ವ್ಯಾಧಿಯುಂ ಕಿಡುವುವಾದುವಲ್ಲಿಂ ತೊಡಗಿ ದಕ್ಷಿಣಾಪಥದೊಳದು ತೀರ್ಥಮಾಯ್ತು

ಮತ್ತೆ ಸ್ವಾಮಿ ಕಾರ್ತ್ತಿಕ[೧]ಋಷಿ[೧]ಯುಂ ವಿಹಾರಿಸುತ್ತಂ ಬಂದು ಕೊಗಳಿಯ ನೆಯ್ದಿಯಲ್ಲಿಯ ಬಸದಿಯೊಳ್ ಪಂಥಾತಿಚಾರ ನಿಯಮಂಗೆಯ್ದು ದೇವರಂ ಬಂದಿಸಿ ಮಧ್ಯಾಹ್ನದಾಗಳ್ ಚರಿಗೆವೊಕ್ಕು ಚಾತುರ್ವರ್ಣ್ಯದ ಮನೆಗಳುಮಂ[೨] ತೊೞಲುತ್ತಂ ಬಂದರಮನೆಯಂ ಪೊಕ್ಕಾಗಳಾ ಪ್ರಸ್ತಾವದೊಳ್ ಕರುಮಾಡದ ಮೇಗಣ ನೆಲೆಯೊಳಿರ್ದ್ದ ವೀರಶ್ರೀ ಮಹಾದೇವಿಯರಸನ ತಲೆಯಂ ತನ್ನ ತೊಡೆಯ ಮೇಲಿಟ್ಟುಗುರಿಸುತಿರ್ದ್ದಾಕೆ ಭಟಾರರ ಬರವಂ ಕಂಡಱಿದೆಮ್ಮಣ್ಣಂಗಳಪ್ಪ ಭಟಾರರ್ ಚರಿಗೆವಂದಪ್ಪೊರೆಂದು ಮ[೩]ಱಲುಂದಿದ[೩]ರಸನ ತಲೆಯುಂ ಕೆೞಗೊಂದಾಧಾರಮನಿಟ್ಟು ನಿಱಿಸಲೆಂದು ಕರುಮಾಡದಿಂದಿೞಿದು ಪರಿತರ್ಪನ್ನೆಗಂ ಭಟಾರರ್ ವಂದರಮನೆಯಂಗಣಮಂ ಪೊಕ್ಕು ಮಗುೞ್ದು ಪೋಗಿ ಬಾಗಿಲ್ಮಾ[೪]ಡಮನೆಯ್ದಿದಾ[೪]ಗಳರಸಿ ಪೆಱಗಣಿಂ ಪರಿತಂದು ಬಂದು ಮುಂದೆ ನಿಂದು ಕೈಗಳಂ ಮುಗಿದೆಱಗಿ ನಿಲ್ಕೆ ಭಟಾರಾ ಎಂದು ನಿಱಿಸಿಸೊಡೆ ಭಟಾರರೆಂದರಬ್ಬಾ ಮನೆಯಂ ಪೊಕ್ಕು ಬಂದೊಮಿನ್ನೆಮಗೆ ನಿಲಲಾಗದೆಂದೊಡರಸಿಯಿಂತೆಂದಳ್ ಭಟಾರಾ ನೀಮೆನಗೆ ದಯೆಗೆಯ್ದು ಮೋಘಂ ನಿಲಲ್ವೇೞ್ಕುಮೆಂದು ಪೋಗಲೀಯದೆ ಕಾಲಂ ಪಿಡಿದು ತಾಂಗುತ್ತಿರ್ಪನ್ನೆಗಮ್

ಇತ್ತರಸನೆೞ್ಚತ್ತು ದೆಸೆಗಳಂ ನೋಡಿಯರಸಿಯಂ ಕಾಣದ[೫]ಱ[೫]ಸಿಯೆಲ್ಲಿರ್ದ್ದೊಳೆಂದು ಕೆಲದವರಂ ಬೆಸಗೊಂಡೊಡವರೆಂದೊರರಸಿಯೊರ್ವ[೬]ಸ[೬]ವಣಂ ಬಂದೊಡಾತನಂ ಕಂಡು ಕರುಮಾಡದಿಂದಿೞಿದು ಪರಿದು ಬೞಿಯಂ ತಗುಳ್ದು ಬಾಗಿಲ್ವಾಡದಲ್ಲಿ ಸವಣನೊಡನಾ ಪೋರುತ್ತಿರ್ಪ್ಪೊಳ್ ನೋಡಿಮೆಂದರಸಂಗೆ ತೋಱಿದೊಡರಸಂ ಕಂಡೆನ್ನನಗಲ್ದು[೭]ನಿಚ್ಚಲೀ[೭] ಸವಣನಲ್ಲಿಗೆ ಪರಿ[೮]ವ[೮]ಳೆಂದು ಕಿನಿಸಿ ಕರುಮಾಡದಿಂದಿೞಿದು ರಿಸಿಯರಿರ್ದ್ದಲ್ಲಿಗೆವೋಗಿ ಶಕ್ತಿಯೆಂಬಾಯುಧದಿಂದುರಮನುರ್ಚಿಪೋಗಿಟ್ಟರಸಿಯುಮಂ ತಲೆನವಿರಂ ಪಿಡಿ[೯]ದು ದಱದಱನೆ[೯]ೞೆದುಕೊಂಡು ಬಂದಂ

ಸ್ವಾಮಿ ಕಾರ್ತ್ತಿಕಋಷಿಯುಂ ಕ್ಷಮೆಯಂ ಭಾವಿಸಿ ನೆತ್ತರೊಕ್ಕು ಬಸಮೞಿದು ಬೇಸಗೆಯ ಕಡುವಿಸಿಲಿಂದಂ ಝುಳದಿಂದಂ ಬೆಂಕೆಯಿಂದಂ ನೀರೞ್ಕೆಯಧಿಕಮಾಗಿ ತಣ್ಪಿ[೧೦]ನೊಳೊ[೧೦]ಳ್ಪಿತ್ತು ಸಮಾಧಿಯಕ್ಕುಮೆಂದು ಮನದೊಳ್ ಬಗೆದಿರ್ದ್ದೊನನ್ನೆಗಂ ತಮ್ಮಜ್ಜಿಯಪ್ಪ ವೀರಮತಿ ಮಹಾದೇವಿ ಬ್ರಹ್ಮಚರ್ಯವ್ರತಮಂ ಕೊಂಡು ಕಾಲಂ ಗೆಯ್ದು ವ್ಯಂತರದೇವತೆಯಾಗಿ ಪುಟ್ಟಿ[೧೧]ದಾ[೧೧]ಕೆಗಾಸನಕಂಪಮಾಗಿಯಱಿದು ಬಂದು ಭಟಾರಾ ಬೆಸನೇನಿವರೆಲ್ಲರುಮಂ ಕೊಂದ[೧೨]ಪ್ಪೆನೆಂ[೧೨]ದೊಡೆ ಭಟಾರರೆಂದರಂತೇ[೧೩]ನುಂ ಬೇ[೧೩]ಡ ನೀನೆಮ್ಮಂ ತಣ್ಪೆಡೆಗೆ ಕೊಂಡುಪೋಗೆಂದೊಡೆ

೧. ಮುನಿ (ಘ,ಚ,ಛ). ೨. + ತೊೞಲ್ದು (ಕ,ಗ). ೩. ಱಿದು ನಿದ್ರೆಗೈದ (ಘ,ಚ,ಛ). ೪. ಡವ ಮನೆಯುನೆಯ್ದಿದರಾ (ಘ,ಚ,ಛ). ೫. ರ (ಘ,ಚ,ಛ). ೬. ಶ್ರ (ಕ,ಖ,ಗ). ೭. ನಿಚ್ಚಲೆ (ಘ), ನಿಚ್ಚಿಲ (ಛ), (ಚ)ದಲ್ಲಿಲ್ಲ. ೮. ದ (ಘ,ಚ,ಛ). ೯. ದೆ (ಘ,ಚ,ಛ) ೧೦. ಣ್ಪಾದೊಡೊ (ಘ,ಚ,ಛ). ೧೧. ಳ್ದಮಾ (ಕ,ಖ,ಗ). ೧೨. ಪೆಂಬೆಸಸಿಮೆಂ (ಘ,ಚ,ಛ) ೧೩. ನುಮುಂ ಬಗೆಯಲ್ವೇ (ಘ,ಚ,ಛ).

ದೇವಕಿ ನವಿಲ ರೂಪಿನಿಂದೆತ್ತಿಕೊಂಡು ಬೆನ್ನೊಳಿಟ್ಟು ಕೊಗಳಿಯ ಮೂಡಣ ದೆಸೆಯ ಪರ್ವತದ ಕೊಳದ ತಡಿಯೊಳ್ ಲತಾಮಂಟಪದೊಳಿರಿಸಿ ಪೋದೊಡೆ ಬೆಟ್ಟದ ಮೇಗಣಿಂ [೧]ಪಾಯ್ತು[೧]ರ್ಪ ನಿರ್ಝರಶೀ[೨]ಕ[೨]ರಂಗಳಿಂ ಮೆಯ್ಗಾಪ್ಯಾಯನಮಾಗಿ ಸಂನ್ಯಸನಂಗೆಯ್ದು ಶುಭಪರಿಣಾಮದಿಂ ಮುಡಿಪಿ[೩] ಸರ್ವಾರ್ಥಸಿದ್ಧಿಯೊಳ್ ಮೂವತ್ತು ಮೂಱು ಸಾಗರೋಪಮಾಯುಷ್ಯಮನೊಡೆಯೊನಹಮಿಂದ್ರನಾಗಿ ಪುಟ್ಟಿದೊಂ

ಮತ್ತಿತ್ತ ಭಟಾರರ ತಂಗೆಯಪ್ಪ ವೀರಶ್ರೀಯುಂ ಹಾ ಭಟಾರಾ ಎಂದಿರುಳುಂ ಪಗಲುಂ ಪಲವು ದಿವಸಮೊಂದೆ ಪಾಂಗಿನೊಳ್ ಪ್ರಳಾಪಿಸಿ ದುಃಖಂಗೆಯ್ಯೆ ಅರಸನು ಮಾಕೆಗೆ ಕಡು[೪]ನಲ್ಲನಪ್ಪುದಱಿಂದಾದಮಾನುಮುಬ್ಬೆಗಂ ಬಟ್ಟೆ[೫]ದ್ದಿಂ[೫]ತೆಂ ದನಾರೊರ್ವರರಸಿಯುಟ್ಕೆಯಂ ಮಟ್ಗಿಸಿ ದುಃಖಮಂ ಮಱೆ[೬]ಯಿಸುವೊರವ[೬]ಗ್ಗೊರ್ಸಗೆ[೬]ಯಂ ಮಾಡುವೆನೆಂದು ಪೊೞಲೊಳಗೆ ಗೋಸಣೆಯಂ ತೊೞಲ್ಚಿದೊಡದಂ ಕೇಳ್ದು [೭]ಲೋ[೭]ಗರ್ ಪಗರಣಿಗರಾಗಿ ಎನಿತಾನುಂ ತೆಱದ ರೂಪುಗಳಂ ಕೈಕೊಂಡು ಮರಮೊಗಂಗಳನಿಟ್ಟು ಬಂದು ಮುಂದೆ ಆಡಿಯುಂ ಪಾಡಿಯುಂ ನಗಿಸಿಯುಮೆಂತು ಮಟ್ಕಿ [೮]ಮಟ್ಗ[೮]ದಿರ್ದೊಡೊರ್ವಂ ಕರಿಯ ಕಚ್ಚುಟಮನುಟ್ಟು ಮೆಯ್ಯೆಲ್ಲಂ ಮಸಿಯಂ ಪೂಸಿ ಬೋೞದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆಮಾಡಿ ಕುಂಚಮುಂ ಗುಂಡಿಗೆಯುಮಂ ಪಿಡಿದು [೯]ಬಪ್ಪೊ[೯]ನನರಸಂ ಕಂಡಿಂತೆಂದನೆಲೆಯರಸಿ ನಿನ್ನ ಸಹೋದರಂಗಳಪ್ಪ ಭಟಾರರಾ ಬಪ್ಪೊರೆಯೆಂದು ಪೇೞ್ದಾಗಳೆಲ್ಲಿರ್ದ್ದರೆಂದೆೞ್ದು ನೋಡಿ ಕಾಣದಾ ರೂಪಂ ಕಂಡು ನಕ್ಕು ದುಃಖಮಂ ಮಱೆದೊಳಾಗಳಾ ನಗಿಸಿದ ಪಗರಣಿಗಂಗೆ ಪಿರಿದು ಕಸವರಮನಿತ್ತೊನಂದಿಂದಿತ್ತ ಬಾರ್ದು[೯]ಬ್ಬೆ[೯]ಯ ಪರ್ವಮುಂ ಪಗರಣವಾಟಪಾಟಮುಮಾದುವು ಮತ್ತೆ ಸ್ವಾಮಿ ಕಾರ್ತ್ತಿಕ ಋಷಿಯರ್ ಮುಡಿಪಿದಲ್ಲಿ ಯವರ ತಂಗೆಯಪ್ಪ ವೀರಶ್ರೀ ಬಸದಿಯಂ ಮಾಡಿ[೧೦]ದೊಡಂದಿಂದಿತ್ತ[೧೦] ಸ್ವಾಮಿ ಯೆಂಬ ತೀರ್ಥಮಾಯ್ತು ಮತ್ತಿತ್ತ ಕೃತ್ತಿಕೆಯೆಂಬ ಪೊೞಲನಾಳ್ವಗ್ನಿರಾಜನೆಂಬರಸಂ ತನ್ನ ಮಗಳಂ ತಾನೆ ಕೊಂಡು ಮೊಱೆಯೞಿದನಪ್ಪುದಱಿಂದಲ್ಲಿಯ ಜನಮುಂ

**ಶ್ಲೋಕ ||** ರಾಜ್ಞಿ ಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಸಮಾಶ್ರಿತಾಃ |
ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ||

ಎಂದರಸನಂ ಕಂಡು ಮೊಱೆಯೞಿದು ನೆಗ[೧೧]ೞಲ್[೧೧] ತಗುಳ್ದೊಡಾ ಪೊೞಲ್ಗೆ [೧೨]ಭೋಗಂ[೧೨]ಕಾರೋಹಣಮೆಂದು ಪೆಸರನಿ[೧೩]ಟ್ಟರಿದು[೧೩] ಸ್ವಾಮಿ ಕಾರ್ತ್ತಿಕ ಋಷಿಯ ಕಥೆ ಮತ್ತೆ ಪೆಱರುಂ ಪರಮ ಸಹಜ ರತ್ನತ್ರಯಂಗಳನಾರಾಧಿಸುವವರ್ಗ್ಗಳ್ ಸ್ವಾಮಿ ಕಾರ್ತ್ತಿಕ ಋಷಿಯರಂ ಮನದೊಳ್ ಬಗೆದೇಱುಂ ಪುಣ್ಣುಂ ವ್ಯಾಧಿಯುಂ ಪಸಿವು ನೀರೞ್ಕೆ ಶೀತವಾತೋಷ್ಣಂಗ[೧೪]ಳುಮಂ[೧೪] ಸೈರಿಸಿ[೧೫] ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

೧. ಪರಿತ (ಫ). ೨. ವ (ಘ,ಛ). ೩. + ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ (ಘ,ಚ,ಛ). ೪. + ಗೂರ್ಪ (ಘ,ಚ,ಛ). ೫. ಕ್ಷಿಂ (ಖ). ೬. ಗ್ಗಾರ್ಸೆ (ಘ,ಚ,ಛ). ೭. ರೋ(ಘ,ಛ). ೮. ಮಾಣ (ಕ,ಖ,ಗ). ೯. ಂಬೆ (ಕ,ಖ,ಗ). ೧೦. +ಸಿಪ್ರತಿಮೆಯುಂ ಸ್ವಾಮಿ ಕಾರ್ತ್ತಿಕ ರುಷಿಯ ರೂಪಂ ಮಾಡಿಸಿ ದೆವಸ ದೆವಸಕ್ಕಮರ್ಚಿಸುತ್ತಿರ್ಪುದುಮಂದಿಂದಿತ್ತ (ಘ,ಚ,ಛ). ೧೧. ಳ್ತೆ (ಘ,ಚ,ಛ) ೧೨. ಲೋಕ (ಘ,ಚ,ಛ). ೧೩. ಟ್ಟುನಿಟ್ಟು (ಕ,ಖ,ಗ). ೧೪. ಳ್ಳಂ (ಘ). ೧೫. + ಸಮ್ಯಗ್ ದರ್ಶನ ಜ್ಞಾನಚಾರಿತ್ರಂಗಳಂ ಸಾದಿಸಿ (ಘ,ಛ),+ಮುಡಿಪಿ (ಚ).

## (೧೨) ಅಭಯಘೋಷರೆಂಬ ಮುನಿಯ ಕಥೆ

ಅಭಯಘೋಷರೆಂಬ ಮುನಿಯ ಕಥೆಯಂ ಪೇೞ್ವೆಂ:

**ಗಾಹೆ ॥** ಕಾಕಂದಿ ಅಭಯಘೋಸೋ ವಿ ಚಂಡವೇಗೇಣ ಛಿಣ್ಣಸವ್ವಂಗೋ ।
ತವ್ವೇದಣ ಮಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಕಾಕಂದಿ :— ಕಾಕಂದಿಯೆಂಬ ಪೊೞಲೊಳ್, ಅಭಯಘೋಸೋ ವಿ— ಅಭಯಘೋಷರೆಂಬ ರಿಸಿಯುಂ, ಚಂಡವೇಗೇಣ— ಚಂಡವೇಗನೆಂಬೊನರಸಿನಿಂದಂ, ಛಿಣ್ಣಸವ್ವಂಗೋ— ಕೊಱೆಯೆ ಪಟ್ಟೆಲ್ಲಾ ಮೆಯ್ಯನೊಡೆಯನಾಗಿ, ತವ್ವೇದಣಂ— ಆ ವೇದನೆಯಂ, ಅಧಿಯಾಸಿಯ— ಲೇಸಾಗಿ ಸೈರಿಸಿ, ಪಡಿವಣ್ಣೋ— ಪೊ[೧]ರ್ದಿ[೧]ದೊಂ, ಉತ್ತಮಂ ಅಟ್ಠಂ — ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ಮಗಧೆಯೆಂಬುದು ನಾಡಲ್ಲಿ ಕಾಕಂ[೨]ದಿ[೨]ಯೆಂಬುದು ಪೊೞಲದನಾಳ್ವೊನಭಯಘೋಷನೆಂಬೊನರಸನಾತನ [೩]ಮಹಾದೇವಿ[೩] ಅಭಯಮತಿಯೆಂಬೊಳಂತವರ್ಗ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ ಮತ್ತೊಂದು ದಿವಸಮರಸಂ [೪]ಪೊಱಮಟ್ಟು[೪] ಪೊಱವೊೞಲ ಶೋಭೆಯಂ ತೊೞಲ್ದು ನೋಡುತ್ತಿರ್ಪ್ಪನ್ನೆಗಮೊರ್ವ ಮಿಾಂಗುಲಿ[೫]ಗ[೫]ನೊಂದಾಮೆಯಂ ಬಾೞಿವಾೞಿ[೬] ನಾಲ್ಕು ಕಾಲಂಕಟ್ಟಿ [೭]ಬಳ್ಳಿಯಂ ಕೊರಲೊ[೭]ಳ್ ತಗುಳ್ಚಿಯೆೞಲೆ ಪಿಡಿದುಕೊಂಡು ಪೊೞಲ್ಗಿದಿರಂ ಬರ್ಪ್ಪೊನನರಸಂ ಕಂಡು ತನ್ನ ಬಿನ್ನಣಮಂ [೮]ನೆರೆದ ನೆರವಿಗೆ[೮] ಮೆಱೆಯಲ್ವೇಡಿ ಗೆಂಟಱಿಂ ಚಕ್ರದಿಂ ನಾಲ್ಕು ಕಾಲುಮನೊರ್ಮೊದಲೆ ಪಱಿಯಿಟ್ಟೊಡೆ ಮಿಾಂಗುಲಿಗಂ ಪ್ರಾಣಮುಳ್ಳಂತಿರಾಮೆಯಂ ತನ್ನ ಮನೆಗೆ ಕೊಂಡು ಪೋದೊಡಾ ಇರುಳೊಳಾಮೆ ಪಿರಿದು ವೇದನೆಯಿಂದಂ ನಮೆದು ಸತ್ತಾ ಪೊೞಲೊಳಭಯಘೋಷ ನೃಪತಿಗಭಯಮತಿ ಮಹಾದೇವಿಗಂ ಚಂಡವೇಗನೆಂಬ ಮಗನಾಗಿ ಪುಟ್ಟಿದನಂತವರ್ಗ್ಗಳಿಷ್ಟ ವಿಷಯ ಕಾಮ ಭೋಗ ಸುಖಂಗಳನನುಭವಿಸು[೯]ತ್ತಿರ್ಪನ್ನೆಗಮ್[೯]

ಮತ್ತೊಂದು ದಿವಸಮರಸನುಮರಸಿಯುಂ ಕರುಮಾಡದ ಮೇಗಣ ನೆಲೆಯೊಳ್ ಭೋಗೋಪಭೋಗ ಸುಖಂಗಳನನುಭವಿಸುತ್ತಂ ವಿನೋದದಿಂದಿರ್ಪ್ಪನ್ನೆಗಂ ಚಂದ್ರಗ್ರಹಣಮಾದುದನರಸಂ ಕಂಡನಿತ್ಯಮಂ ಭಾವಿಸಿಯದುವೆ ವೈರಾಗ್ಯಕ್ಕೆ ಕಾರಣಮಾಗಿ ಚಂಡವೇಗನೆಂಬ ಮಗಂಗೆ ರಾಜ್ಯ[೧೦]ಪಟ್ಟಂಗಟ್ಟಿ[೧೦] ಬಾಹ್ಯಾಭ್ಯಂತರ ಪರಿಗ್ರಹ [೧೧]ಪರಿತ್ಯಾಗಂಗೆಯ್ದು[೧೧] ನಂದನರೆಂಬಾಚಾರ್ಯರ ಪಕ್ಕದೆ ತಪಂಬಟ್ಟು ಪನ್ನೆರಡು ವರುಷಮವರೊಡನಿರ್ದ್ದೆಲ್ಲಾ ಪೋದುಗ[೧೨]ಳುಮಂ[೧೨] ಕಲ್ತು

೧. ರ್ದ್ದಿ (ಕ,ಖ,ಗ). ೨. ಬಿ (ಖ). ೩. ಭಾರ್ಯೆ (ಕ,ಗ). ೪. (ಘ,ಚ,ಛ) ಗಳಲ್ಲಿಲ್ಲ. ೫. ಕ (ಖ,ಘ,ಚ,ಛ) ೬. + ಪಿಡಿದು (ಘ,ಚ,ಛ). ೭. ಯೊಂದು ಕೈಯೊ (ಕ,ಖ,ಗ). ೮. (ಕ,ಖ,ಗ) ಗಳಲ್ಲಿಲ್ಲ. ೯. ತ್ತಂ ಪಲಕಾಲಂ ಸಲೆ (ಘ,ಚ,ಛ). ೧೦. ಮಂ ಕೊಟ್ಟು (ಘ,ಚ,ಛ) ೧೧. ಂಗಳಂ ತೊಱೆದು (ಛ) ೧೨. ಳ್ಗಂ (ಕ,ಗ), ಳಂ (ಘ)

ಗುರುಗಳಂ ಬೆಸಗೊಂಡವರನುಮತದಿಂದೇಕ ವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಬಪ್ಪೋರ್ ತಮ್ಮ ಮುನ್ನಿನ ಕಾಕಂದಿಯೆಂಬ ಪೊೞಲ್ಗೆ ವಂದುದ್ಯಾನವನದೊಳ್ ವೀರಾಸನ[೧]ಮಿ[ರ್ದೊ][೧]ರನ್ನೆಗಂ ಮುನ್ನಾಮೆಯಪ್ಪ ಜೀವನವರ ಮಗನಪ್ಪ ಚಂಡವೇಗಂ ಕರುಮಾಡದ ಮೇಗಣ ನೆಲೆಯೊಳಿರ್ದರ್ [೨]ಸೋಂಟಕ್ಕೆ ಗೆಂಟು ಪೋಗೆ[೨] ಚಕ್ರಮ ನಿಟ್ಟೊಡಾ ಚಕ್ರಂ ವಂದು ಋಷಿಯರೆರಡು ಕೆಯ್ಯುಂ ಕಾಲ್ಗಳುಮಂ ಮೊಕ್ಕನೆ ಪೋಗೆ ಕೊಂಡೊಡೆ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ವೇದನೆಯಂ ಸೈರಿಸಿ ಶುಭಪರಿಣಾಮದಿಂ [೩]ರತ್ನತ್ರಯಮಂ[೩] ಸಾಧಿಸಿ ಪದಿನಾಲ್ಕನೆಯ ಪ್ರಾಣತಮೆಂಬ ಕಲ್ಪದೊಳಿರ್ಪ[೪]ತ್ತು[೪] ಸಾಗರೋಪಮಾಯುಷ್ಯಮನೊಡೆಯೊನಿಂದ್ರನಾಗಿ ಪುಟ್ಟಿದೊಂ ೧೦

ಮತ್ತೆ ಪೆಱರು[೫]ಮಾರಾಧಕರುಂ ರತ್ನತ್ರಯಮನಾರಾಧಿಸುತ್ತಿರ್ದರ್[೫] ಭವ್ಯರ್ಕಳಭಯಘೋಷ ಭಟಾರರಂ ಮನದೆ ಬಗೆದು ಪಸಿವುಂ ತೃಷೆಯುಮೇೞುಂ ವ್ಯಾಧಿಯುಂ ಶೀತವಾತೋಷ್ಣಂಗಳುಮೆಂದಿವು ಮೊದಲಾಗೊಡೆಯ ದುಃಖಂಗಳಂ ಸೈರಿಸಿ [೬]ಪರಮಶುದ್ಧ ಸಹಜ ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ[೬] ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

೧. ಮಿರ್ದೊ (ಕ,ಖ,ಗ), ದಿನಿರ್ದರ್ (ಘ,ಚ), ದೊಳಿರ್ದರ್ (ಛ). ೨. ವಿನೋದದಿಂ ಗೆಂಟಱೊಳು (ಘ,ಚ), (ಛ) ದಲ್ಲಿ ನಷ್ಟ. ೩. ಮುಡಿಪಿ ಸಮ್ಯಗ್ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ (ಘ,ಚ,ಛ). ೪. ತ್ರೆರಡು (ಛ). ೫. ೦ ರತ್ನತ್ರಯಂಗಳಂ ಸಾದಿಸುತ್ತಿರ್ಪರ್ (ಘ,ಚ,ಛ). ೬. ಸಮಾಧಿ ಮರಣದಿಂ ಮುಡಿಪಿ (ಘ,ಚ,ಛ).

## (೧೩) ವಿದ್ಯುಚ್ಚೋರನೆಂಬ ರಿಸಿಯ ಕಥೆ

ವಿದ್ಯುಚ್ಚೋರನೆಂಬ ರಿಸಿಯ ಕಥೆಯಂ ಪೇೞ್ವೆಂ :

**ಗಾಹೆ** ॥ ದಂಸೇಹಿ ಯ ಮಸಕೇಹಿ ಯ ಖಜ್ಜಂತೋ ವೇದಣಂ ಪರಮಘೋರಂ ।
ವಿಜ್ಜುಚ್ಚೋರೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ದಂಸೇಹಿಯ–ಚಿಕ್ಕುಟುಗಳಿಂದಂ, ಮಸಕೇಹಿ ಯ–ಗುಂಗುಱುಗಳಿಂದಂ, ಖಜ್ಜಂತೋ–ತಿನೆಪಡುತಿರ್ದೊನಾಗಿ, ವೇದಣಂ–ವೇದನೆಯಂ, ಪರಮಘೋರಂ–ಆದಮಾನುಂ ಕಡಿದಪ್ಪುದಂ, ವಿಜ್ಜುಚ್ಚೋರೋ–ವಿದ್ಯುಚ್ಚೋರನೆಂಬ ರಿಸಿ, ಅಧಿಯಾಸಿಯ–ಲೇಸಾಗಿ ಸೈರಿಸಿ, ಪಡಿವಣ್ಣೋ–ಪೊರ್ದಿದೊಂ, ಉತ್ತಮಂ ಅಟ್ಠಂ–ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ವಿದೇಹಮೆಂಬುದು ನಾಡಲ್ಲಿ ಮಿಥಿಳೆಯೆಂಬುದು ಪೊೞಲದನಾಳ್ವೊಂ ಪದ್ಮ[೨]ರಥ[೨]ನೆಂಬೊನರಸ[೩]ನ ಸಂತತಿಯಿಂ ಬಂದ ವಾಮರಥನೆಂಬೊನರಸನಾತನ ಮಹಾದೇವಿ ಬಂಧುಮತಿಯೆಂಬೊಳಂತ ವರ್ಗ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತಾ ಪೊೞ[೪]ಲೊಳ್ ಯಮ[೪]ದಂಡನೆಂಬೊಂ ತಳಾಱಂ ಮತ್ತಲ್ಲಿ ಇರ್ಪೊಂ ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ-ಸ್ತಂಭಿನಿ ಮೋಹಿನಿ ಸ[೫]ರ್ಷಪಿ[೫] ತಾಳೋದ್ಘಾಟನಿ ವಿದ್ಯಾಮಂತ್ರ[೬] ಚೂರ್ಣ ಯೋಗ ಘುಟಿಕಾಂಜನಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ ಪೊೞಲ ಕಸವರಂಗಳ ನಿರುಳ್ ಕ[೭]ಳ್ದು[೭] ಪೊೞಲ್ಗೆ ನಾಡೆಯುಂತರದೊಳೊಂದು ಪರ್ವತಮುಂಟಲ್ಲಿ ಪಿರಿದೊಂದು ಗುಹೆಯುಂಟದಱೊಳಗೆ [೮]ಕಳ್ದ[೮] ಕಸವರಂಗಳೆಲ್ಲಮಂ ಪೂೞ್ದಿಟ್ಟು ಗುಹೆಯ ಬಾಗಿಲಂ ಪಿರಿದೊಂದು ಸಿಲೆಯಂ ತಂದಿಟ್ಟು ಮುಚ್ಚಿ ಬಂದು ಪಗಲೆಲ್ಲಂ ಪಾೞ್ದೇಗುಲದೊಳಂಜನಮನೆಚ್ಚಿ ತಾಂ ತೊನ್ನನಾಗಿ ಮುರುಂಟಿದ ಕೈಯುಂ ಕಾಲುಂ ಬೆರ[೯]ಸು ಮೂಗೊಳಗಿರ್ದು[೯] ರಸಿಗೆ ಸುರಿಯೆ ನೊಳವುಗಳ್ ಮುಸುಱಿ [೧೦]ಕೊಂಡು[೧೦] ತಿನೆ [೧೧]ಪೇಸಿದ[೧೧]ನಾಗಿ ಲೋಗರ ಮನೆಗಳೊಳ್ ಭೈಕ್ಷಮಂ ಬೇಡಿ ಮನೆಮನೆಯಂ ತೊೞಲ್ದು ತನ್ನ [೧೨]ತೊನ್ನುಗೊಂಡಿರ್ಪುದನಱಿಪುತ್ತುಮಿಂತು ಪಗಲೆಲ್ಲಮಿರ್ದಿರುಳಪ್ಪಾಗಳ್ ದಿವ್ಯಮಪ್ಪ ತನ್ನ ಸ್ವಾಭಾವಿಕಮಪ್ಪ ಮುನ್ನಿನ ರೂಪಂ ಕೈಕೊಂಡು ಪಟ್ಟೆಗೆಯನುಟ್ಟು ಮೆಯ್ಯಂ ಪೂಸಿ ಪೂವಂ ಮುಡಿದು ಕರ್ಪೂರ ಸಂಮಿಶ್ರಿತಮಪ್ಪ ತಂಬುಲಂದಿನುತ್ತುಂ ಸೂಳೆಗೇರಿಗಳಂ ತೊೞಲ್ದು ತನ್ನಂ ಮೆಱೆಯುತ್ತಂ[೧೨] ಮನಕ್ಕೆ [೧೩]ವಂದಗ್ಗಳದೊ[೧೩]ಳ್ಪೆಂಡಿರೊಳೊತ್ತೆಯನಿಟ್ಟು ಭೋಗೋಪಭೋಗಂಗಳ್ಗೆ ಕಸವರಮಂ ಕೊಟ್ಟನುಭವಿಸುತ್ತಮಾರುಮಱಿಯದಂತಿ[೧೪]ರ್ದು[೧೪]

೧. ಳ್ದಿ (ಕ,ಖ,ಗ). ೨. ದರ (ಛ). ೩. +ನಾತ (ಘ,ಚ). ೪. ಲ ಕಾವೊಂ ಜವ (ಘ,ಚ,ಛ). ೫. ರ್ಷಪ (ಖ), ರಿಷಪ (ಘ,ಚ), ರಿಷ ಪಾ (ಛ). ೬. + ಯಂತ್ರ (ಘ,ಚ,ಛ). ೭. ದ್ದು (ಚ). ೮. ಕಳ್ದು ತಂದ(ಘ,ಛ), ಕಳ್ದು ಕಳ್ದು ತಂದ (ಚ). ೯. ಸೂರೊಳಗಿರ್ದು (ಕ,ಖ,ಗ). ೧೦. ಕಡಿಯೆ (ಕ,ಖ,ಗ) ೧೧. ದೇಸಿಗ (ಘ,ಚ,ಛ). ೧೨. ಮಱಯಿಸುತ್ತುಂ (ಕ,ಗ), ಮಱಿಯುತ್ತಂ (ಖ). ೧೩. ಮೆಚ್ಚಿದಾಗಳೊ (ಕ,ಖ,ಗ). ೧೪. ಳ್ದು (ಕ,ಖ,ಗ).

ಬಚ್ಚರ ದೂಸಿಗರ [1]ನಿಯೋಗಿಗಳ ಅಗ್ಗಳಮಪ್ಪ[1] ಸೂಳೆಯರ ಸಾಮಂತರ ಕಸವರಂಗಳೆಲ್ಲಮಂ ಕಳ್ದು ಮತ್ತೊಂದು ದಿವಸಂ[2] ಪದ್ಮರಥಂಗೊಸೆದಚ್ಯುತೇಂದ್ರನಿಟ್ಟಿದ ದಿವ್ಯಮಪ್ಪ ಸರ್ವರುಜಾಪಹಾರಮೆಂಬ ಹಾರಂ ಸಂತತಿಯಿಂ ವಾಮರಥಂಗೆ ಬಂದುದಂ ವಾಮರಥಂ ಕರುಮಾಡದೇೞನೆಯ ನೆಲೆಯೊಳ್ ತನ್ನ [3]ಲುಂದುವೋವರಿಗೆಯ[3] ಪುಡಿಕೆಯೊಳಿಟ್ಟೆಲ್ಲಾ ಕಾಲಮುಂ ಗಂಧ ಪುಷ್ಪ ದೀಪ ಧೂಪಾಕ್ಷತಂಗಳಿಂದರ್ಚಿಸುತ್ತಂ ಪೊಡೆಮಡುತ್ತಮಿರ್ಕ್ಕುಮಿಂತಪ್ಪ ಹಾರಮಂ ವಿದ್ಯುಚ್ಚೋರನಾಜನಮಂ ಕಣ್ಣೊಳಿಚ್ಚಿಯಾರುಂ ತನ್ನಂ ಕಾಣದಂ[4]ತಾಗಿರೆ ಅರಮನೆಯಂ[4] ಪೊಕ್ಕರಸನ [5]ಮಱಲುಂದುವೋ[5]ವರಿಯಂ ಪೊಕ್ಕು ತಲೆದೆಸೆಯೊಳರ್ಚಿಸಿರ್ದ ಪುಡಿಕೆಯಂ ತೆಱೆದು ಹಾರಮಂ ಕೊಂಡರಮನೆಯಿಂ ಪೊಱಮಟ್ಟು ಪೋಗಿ ಪೊಱವೊೞಲ ಗುಹೆಯೊಳ್ ಪೂೞ್ದಿಟ್ಟು ಪೊೞಲ್ಗೆ ವಂದು ಮುನ್ನಿನಂತೆ ತೊನ್ನರೂಪಂ ಕೈಕೊಂಡಿ[6]ರ್ದಂ[6]

ಮತ್ತಿತ್ತರಸಂ ನೇಸರ್ಮೂ[7]ಡೆ[7] ಹಾರಮಂ ಕಾಣದೆ ಆಸ್ಥಾನಮಂಟಪದೊಳ್ ಸಿಂಹಾಸನಮಸ್ತಕಸ್ಥಿತನಾಗಿ[8]ರ್ದು[8] ತಳಾಱನಪ್ಪ [9]ಯಮ[9]ದಂಡಂಗೆ ಬೞಿಯಟ್ಟಿ ವರಿಸಿ ಇಂತೆಂದನೆಲವೊ ಯಮದಂಡಾ ಪೊೞಲ ಪಾರ್ವರ[10] ಪರದರ[10] ಸೂಳೆಯರ [11]ಒಕ್ಕಲ ಮಕ್ಕಳ[11] ಕಸವರಮೆಲ್ಲಮಂ ಕಳ್ದೊಡವಾರಯ್ಯದೆ ಕೆಮ್ಮಗಿರ್ಪೆಯಲ್ಲದೆಯುಮೆಮ್ಮ ಸೆಜ್ಜೆಯೋವರಿಯಂ ಕಳ್ಳಂ ಪೊಕ್ಕು ಪುಡಿಕೆಯಂ ತೆಱೆದಚ್ಯುತೇಂದ್ರನಿತ್ತ ಕುಲಧನಮಪ್ಪ ಹಾರಮಂ ಕೊಂಡುಪೋದಂ ಬೇಗಂ ಕಳ್ಳನನಾರಯ್ದು ಹಾರಮಂ ಕೊಂಡು ಬಾ ಅಲ್ಲದಾಗಳ್ ಕಳ್ಳಂಗೆ ತಕ್ಕ ನಿಗ್ರಹಮಂ ನಿನಗೆ ಮಾಡಿದಪ್ಪೆನೆಂದೊಡೆ ತಳಾಱನೆಂದಂ ದೇವಾ ಏೞುದಿವಸಮೆನಗೆಡೆಯನೀವುದೇೞು ದಿವಸದಿಂದೊಳಗೆ ಕಳ್ಳನನಾರಯ್ಯಲಾಱಿದಾಗಳ್ ದೇವರೆನ್ನಂ ಮೆಚ್ಚುಕೆಯ್ವುದೆಂದೊಡರಸನಂತೆಗೆಯ್ಯೆಂದೊಡರಮನೆಯಿಂದಂ ಪೊಱಮಟ್ಟು ಪೊೞಲೊಳಗೆ ಸೂಳೆಗೇರಿಗಳೊಳಮಂಗಡಿಗಳೊಳಂ [12]ಬಸದಿಗಳೊಳಂ ವಿಹಾರಂಗಳೊಳಂ ಕೇರಿಗಳೊಳಮಾರಮೆಗಳೊಳಂ ದೇವಾಲಯಂಗಳೊಳಂ[12] ಪೊಱವೊೞಲೊಳಂ ಕೆಲದ ಪೊೞಲ್ಗಳೊಳಮಾಱುಂ ದಿವಸಂ[13] ನಿರಂತರಮಾರಯ್ದೆಲ್ಲಿಯುಂ ಕಾಣದೇೞನೆಯ ದಿವಸದಂದು ಪಾೞ್ದೇಗುಲದೊಳಿರ್ದು ತೊನ್ನಂ ಪೋಪಾಗ[14]ಳ್ ಪಿರಿದೊಂದು ಕಿಱು[14]ವಳ್ಳಮಂ [15]ಕಂಡದಂ ವಿದ್ಯಾಧರ[15]ಕರಣದಿಂ ಲಂಘಿಸಿ ಪೋಪುದಂ ಯಮದಂಡಂ ಗೆಂಟಱೊಳಿರ್ದು ಕಂಡಿವನೆ ಕಳ್ಳನೆಂದು ನಿಶ್ಚಯಿಸಿ ಪಿಡಿದರಮನೆಗೆ ಪುಯ್ಯಲಿಡೆಯಿಡೆ ಕೊಂಡು ಪೋ[16]ಗಿಯ[16]ರಸಂಗೆ ಕಳ್ಳನಂ ತಂದೆನೆಂದು[17] ತೋಱಿ ಈತಂ ಕಳ್ಳನೆಂದರಸಂಗೆ ವೇೞ್ದೊಡೆ ತೊನ್ನನಿಂತೆಂದಂ

---

೧. ನಿಳ್ಗೊಂಗಿಗಳಗ್ಗಯಿಮ(ಲೆ)ಯರಪ್ಪ (ಘ,ಚ,ಛ). ೨. + ಪೂರ್ವದೊಳ್ (ಘ,ಚ,ಛ). ೩. ಪವಡಿಪೋವರಿಯೊಳ್ (ಘ,ಚ,ಛ). ೪. ತದೃಶ್ಯ ರೂಪದಿಂ (ಘ,ಚ,ಛ). ೫. ಪವಡಿಪೋ (ಘ,ಚ,ಛ). ೬. ಳ್ದಂ (ಕ,ಗ). ೭. ಡಿದಿಂ ಬಳಿಕ್ಕೆ (ಘ,ಚ,ಛ). ೮. ಳ್ದು (ಕ,ಗ). ೯. ಜವ (ಘ,ಚ,ಛ), ಮುಂದೆಯೂ ಈ ಪ್ರತಿಗಳಪಾಠ ಹೀಗೆ. ೧೦. (ಕ,ಖ,ಗ) ಗಳಲ್ಲಿಲ್ಲ. ೧೧. ಏರಣಿಗರ (ಘ,ಛ), (ಚ) ದಲ್ಲಿ ತ್ರುಟಿತ. ೧೨. ದಿಂಟಿಗಳೊಳಂ ದೇಗುಲಂಗಳೊಳಂ ವಿಹಾರಂಗಳೊಳಂ ಕೆಱೆ ತೊಱೆಗಳೊಳಂ (ಘ,ಚ,ಛ). ೧೩. +ಕಳ್ಳನಂ(ಘ,ಚ,ಛ). ೧೪. ಆಱೆಱು (ಘ,ಚ,ಛ). ೧೫. ವಿದ್ಯುಚ್ಚೋರಂ ವಿದ್ಯುತ್ (ಕ,ಖ,ಗ) ೧೬. ಪರನ್ನೆಗಮ (ಕ,ಖ,ಗ). ೧೭. +ತೊಣ್ಣರನಂ (ಘ), ತೊನ್ನನಂ (ಚ).

ದೇವಾ ನಾಂ ಕಳ್ಳನಲ್ಲದುದರ್ಕ್ಕೆ ಪೊೞಲೆಲ್ಲಮಱಿಗುಂ ಕಳ್ಳನನಾರಯ್ಯಲಾಱದೆನ್ನಂ ತನ್ನ ಸಾವಿಂಗಂಜಿ ಬಡವನಂ ದೇಸಿಗನಂ ಪೊೞಲೊಳ್ ಬೈಕಂದಿರಿದುಂಡು ಬಾೞ್ವನಂ ಪಿಡಿದುಕೊಂಡು ಬಂದು ಕೊಲಿ[೧]ಸಿ[೧]ದಪ್ಪನೆಂದೊಡೆ ತಳಾಱಂ ಕಳ್ಳರನಾರಯ್ವ ಶಾಸ್ತ್ರಂಗಳೊಳಾದಮಾನುಂ ಕುಶಲನಪ್ಪುದಱಿಂದರಸಂಗಿತೆಂದನೀತಂ ತನ್ನ ರೂಪುಗರೆದಿರುಳ್ ಪೊೞಲೆಲ್ಲಮುಂ ಕಳ್ದು ದಿವಸಕ್ಕೀ ಪಾಂಗಿನೊಳ್ ತೊನ್ನನಾಗಿರ್ಪೊಂ ನೀಮುಂ ನಂಬದಾಗಳ್ ಪ್ರತ್ಯ[೨]ಯಮಂ[೨] ಮಾಡಿ ತೋರ್ಪೆನೆಂದಾಗಳ್ ಪ್ರತಿಘುಟಿಕಾಂಜನಂಗಳಂ ತೊನ್ನನ ಕಣ್ಣಿನೊಳೆಚ್ಚಿದೊಡೆ ದಿವ್ಯಮಪ್ಪ ತನ್ನ ಮುನ್ನಿನ ರೂಪಾ[೩]ಗಿ[ರ್ದಿ]ಂತೆಂದನೀ[೩]ತಂ ಘುಟಿಕಾಂಜನ ಕುಹಕಂ ಇಂದ್ರಜಾಲಂಗಳಂ ಬಲ್ಲೊನಪ್ಪುದಱಿಂದೆಲ್ಲಾ ರೂಪುಗಳಂ ಮಾಡಲ್ ಬಲ್ಲೊನೆಂದೊಡೆ ತಳಾಱನೆಂದಂ ಪೆಱರ್ಗೆ ಮಾಡೀ ಪ್ರತ್ಯಯಮಂ ತೋರ್ಪೆನೆಂದರಸನನುಮತದಿಂದರಸಿಯರ ಸೂಳೆಯರ ಕಣ್ಗಳೊಳ್ ಘುಟಿಕಾಂಜನಂಗಳನೆಚ್ಚಿದೊಡನಿಬರುಂ ತೊನ್ನೆಯರಾಗಿರ್ಪರನ್ನೆಗಂ

ಮತ್ತಂ ಬೞಿಕ್ಕೆ ಪ್ರತಿಘುಟಿಕಾಂಜನಂಗಳನೆಚ್ಚಿದೊಡೆ ಸ್ವಾಭಾವಿಕಮಪ್ಪ ತಮ್ಮ ಮುನ್ನಿನ ರೂಪುಗಳಂ ಕೈಕೊಂಡಿರ್ದ್ದೊರಾಗಳರಸಂಗೆ ನಂಬುಗೆಯಾಗಿ ನೆಟ್ಟನಿವಂ ಕಳ್ಳನಪ್ಪೊನೀತನಂ ದಂಡಿಸೆಂದು ಯಮದಂಡಂಗೆ ಬೆಸವೇೞ್ದೊಡಾತನಂತೆ ಗೆಯ್ವೆನೆಂದಾತನಂ ತನ್ನ ಮನೆಗೊಡಗೊಂಡು ಪೋಗಿ ಮಾಘಮಾಸದಿರುಳ್ ಕಡುಸೀತದೊಳ್ ಘೋರಮಪ್ಪ[೪] ಮೂವತ್ತೆರಡು ದಂಡಣೆಗಳಿಂ ನೀಡುಂ ದಂಡಿಸೆಯುನಿತುಮಂ ಬಾೞಿವಾೞಿ ಅವಯವದೆ ಸೈರಿಸಿ[೫]ಯುಂ[೫] ಕಳ್ಳನಲ್ಲೆನಯ್ಯೋ ಬಲ್ಲಾಳ್ತನದಿಂದೆನ್ನಂ [೬]ತಳಾಱಂ[೬] ಕೊಂದಪ್ಪನೆಂದೊಳಱಿ ಪುಯ್ಯಲಿಡೆ ತಳಾಱಂಗೆ ಕಳ್ಳನೀತನಲ್ಲೆಂಬುದೊಂದು ನಂಬುಗೆಯಾಗೆ ನೇಸಱ್ ಮೂ[೭]ಡೆಯ[೭]ರಮನೆಗೆ ಪೋಗಿ ಅರಸಂಗಿಂತೆಂದು ಬಿನ್ನಪಂಗೆಯ್ದಂ

ದೇವಾ ಮೂವತ್ತೆರಡು ಘೋರಮಪ್ಪ ದಂಡಣೆಗಳಿಂದಂ ಕಳ್ಳನಂ ದಂಡಿಸಿ ನೋಡಿದೆನಾತನಮೋಘಂ ಕಳ್ಳನಲ್ಲೆನ್ನಂ ದೇವರ್ ಮೆಚ್ಚುಕೆಯ್ವುದೆಂದೊಡರಸಂ ಶ್ಮಶಾನದ ಸೂಲದೊಳ್ ಯಮದಂಡನನಿಕ್ಕಿಮೆಂದಾ[೮]ಳ್ಗಳ್ಗೆ[೮] ಬೆಸವೇೞ್ದೊಡವರುಮಾತನಂ ಶ್ಮಶಾನಕ್ಕೆೞೆದುಕೊಂಡು ಪೋಗಿ ದರ್ಕ್ಕಂ ಬಸಿದು ಸೂಲದೊಳಿಕ್ಕುವಾಗಳವರೊಡವೋಗಿ ತೊನ್ನಂ ರೂಪಪರಾವರ್ತನಂಗೆಯ್ದು ತನ್ನ ಸ್ವಾಭಾವಿಕಮಪ್ಪ ವಿದ್ಯುಚ್ಚೋರನಪ್ಪ ದಿವ್ಯರೂಪಂ ಕೈಕೊಂಡು ಸೂಲದೊಳಿಕ್ಕಲೀಯದೆ ಅರ್ದ್ಧ[೯]ಮಾಗಿರ್ದ[೯]ರಸನ ಕಾಪಿನವರನೆಂದನೆಲೆಯಣ್ಣಗಳಿರಾ ನೀಮೀತನಂ ಕೊಂದಿರೀತನುಂ ಸೂಲದೊಳಿರ್ಕೆ ಪಟ್ಟನಾಗಿ ಸತ್ತವನೆಂದವರೊಳ್ ನುಡಿದು ತಳಾಱನನಿಂತೆಂದನೆಲೆಗಳಾ ಯಮದಂಡಾ ನೀನುಮಾನುಂ ಕಿಱಿಯಂದೊರ್ವರುಪಾಧ್ಯಾಯರ ಪಕ್ಕ

೧. ಸಲ್ ಬಗೆ (ಘ,ಚ,ಛ). ೨. ಕ್ಷಂ (ಘ,ಚ,ಛ). ೩. ಳ್ದಿಂತೆಂದನೀ (ಕ,ಖ,ಗ), ರ್ದದಂ ಕಂಡಿರೆಯಾ (ಘ,ಚ,ಛ). ೪. +ಕಳ್ಳನಂ (ಕ,ಖ,ಗ). ೫. ಯಾಂ (ಘ,ಚ,ಛ). ೬. (ಘ,ಚ,ಛ) ಗಳಲ್ಲಿಲ್ಲ. ೭. ಡುವುದುವು (ಘ,ಚ,ಛ). ೮. ಗಳ್ (ಕ,ಖ,ಗ). ೯. ಮಾಗಿಳ್ದ (ಕ,ಖ,ಗ), ಮಿರ್ದ (ಘ,ಚ).

ದೊೞೋದುವಂದು ನಂದನವನದೊಳಗೆ ನೀನೆನ್ನ ಪೂಣ್ದ ಪ್ರತಿಜ್ಞೆಯಂ ನೆನೆ[೧]ದಾ ಒಂದುಂ ದೋಷಮಿಲ್ಲದೆ ನಿನ್ನಂ ಕೊಲಿಸಿದೆನೊ ಕೊಲಿಸೆನೊ ಪೂಣ್ದ ಪ್ರತಿಜ್ಞೆಯಂ ನೆನೆವೆಯೊ ನೆನೆಯೆಯೊ ಎನೆ ಯಮದಂಡನೊಳ್ಳಿತ್ತಾಗಿ ನೆನೆದೆನೆಂದೊಡೆ[೧] ವಿದ್ಯುಚ್ಚೋರನಿಂತೆಂದಂ ಮತ್ತೀಗಳ್ ನೀನೇನ್ ಸತ್ತೆಯೊ ಸಾಯೆಯೊ ಮ[೨]ತ್ತೇನೊ[೨] ಎಂದಾಗಳ್ ಯಮದಂಡನೆಂದಂ ದೇವಾ ನೀಂ ಗೆಲ್ದೆಯಾಂ ಸೋಲ್ತೆ[೩]ನುಂ ಸತ್ತೆನುಮೆಂದಿರ್ವರ್ ಪದಿರ್ನಿಂ[೩] ನುಡಿವ ಸೂೞ್ಮಾತುಗಳಂ ಕಾಪಿನವರುಂ ಪೊೞಲ ಜನಮುಂ ಕೇಳ್ದು ಚೋದ್ಯಂಬಟ್ಟು ಬೆಳಗಾಗಿರ್ದೊಡೆ ವಿದ್ಯುಚ್ಚೋರಂ ಕಾಪಿನವರನಿಂತೆಂದನೆನ್ನುಮನೀತನುಮನರಸನಲ್ಲಿಗೆ ಕೊಂಡುಪೋಗಿಮರಸನ ಮುಂದೀತಂಗಮೆನಗಂ ಮಾತುಂಟಲ್ಲಿ ನುಡಿದ ಬೞಿಕ್ಕರಸನೀತನಂ ಮೆಚ್ಚುಕೆಯ್ಗೆ[೪]ಎಂತುಂ ಕೊಲವೇೞ್ದೊಡಂ[೪] ಮೂಱು ಸೂೞ್ ಬೆಸಗೊಂಡಲ್ಲದೆ ಕೊಲಲಾಗದೆಂದು ನೀತಿಶಾಸ್ತ್ರದೊಳ್ ಪೇೞ್ದುದಱಿಂದೆಮ್ಮಿರ್ವರುಮನರಮನೆಗೆ ಕೊಂಡುಪೋಗಿ ಅರಸಂಗೆ ತೋಱಿಮೆಂದೊಡಾ ಕಾಪಿನವರಿರ್ವರುಮನರಸನಲ್ಲಿಗೆ ಕೊಂಡುಪೋಗಿ ಇಂತೆಂದು ಬಿನ್ನಪಂಗೆಯ್ದರ್ ದೇವಾ ಈತಂ ಯಮದಂಡನಂ ಕೊಲಲೀಯದೆ ಬಾರಿಸಿದನೆಂದು ವಿದ್ಯುಚ್ಚೋರನಂ ತೋಱಿ ನುಡಿದೊಡರಸನೇಕೆ ನೀಂ ಬಾರಿಸಿದೆಯೆಂದು ಬೆಸಗೊಂಡೊಡೆ ವಿದ್ಯುಚ್ಚೋರನೆಂದಂ

ಯಮದಂಡಂಗೇನುಂ ಪೊಲ್ಲಮೆಯುಂ [೫]ದೋಷ[೫]ಮುಮಿಲ್ಲ ನಿಮ್ಮ ದೇವತಾರಕ್ಷಿತಮಪ್ಪ ಸರ್ವರುಜಾಪಹಾರಮೆಂಬುದು ಮೊದಲಾಗಿ ಪೊೞಲ[೬] ಕಸವರಮನಿರುಳೀ ರೂಪಿನೊಳ್ ಕಳ್ದು ಪಗಲೆಲ್ಲಂ ತೊನ್ನನಾಗಿ ಪಾೞ್ದೇಗುಲದೊ[೭]ಳಿ[೭]ರ್ಪೆನದಱಿಂದೆನ್ನಂ ಕೊಲ್ಲಿಮೀತಂಗೇನುಂ ದೋಷಮಿಲ್ಲೆಂದೊಡರಸನೆಂದನಾ[೮] ಕಳ್ದ ಕಸವರಮನೆಲ್ಲಮನೇಗೆಯ್ದೆಯೆಂದು ಬೆಸಗೊಂಡೊಡನಿತುಮಿರ್ದುವಯ್ನೂಸಿರಮಱುಸಾಸಿರ ದೀನಾರ[೮]ಮೆ[೮]ನ್ನ ಸೂಳೆಗೆ ಬಿಯ[೯]ಮಾದುದು[೯]ೞಿದು[೧೦]ವೆಲ್ಲ[ಂ] ವಣ್ಣ[ಂ] ಚಳಿಯದಿ[೧೦]ರ್ದುದೆಂದೊಡರಸಂ ವಿದ್ಯುಚ್ಚೋರನಂ ಹಾರಮಂ ಕೊಂಡುಬಾ ಪೊೞಲವರ್ಗ್ಗ[೧೧]ಂ ಕಸವರಮಂ ಮಡಗಿದೆಡೆಯಂ ತೋಱೆಂದಾತನೊಡನೆ ಪೊೞಲ ಜನಮುಮನಟ್ಟಿ ಕಾಪುವೆರಸು ಪೋಗಿ ಪೊೞಲ್ಗೆ ನಾಡೆಯಂತರದೊಳ್ ಪಿರಿದೊಂದು ಪರ್ವತಮುಂಟಲ್ಲಿಯೊಂದು ವಿಸ್ತೀರ್ಣ ಗುಹೆಯುಂಟದಱ ಬಾಗಿಲಂ ಮುಚ್ಚಿರ್ದ ಪಿರಿಯ ಸಿಲೆಯಂ ಕಳೆದದಱೊಳಗೆ ಪೊಕ್ಕು ಹಾರಮಂ ಕೊಂಡು *ಪೊೞಲ ಜ[೧೧]ನಮೆಲ್ಲಮನೆಂದಂ ನಿಮ್ಮನಿಮ್ಮ ಕಸವರಮಪ್ಪುದನಾರಯ್ದು[೧೧]ಪಲ್ಲಟಿಸಲೀಯದೆ ನೋಡಿಕೊಳ್ಳಿಮೆಂದು ತೋಱಿದೊಡವರುಂ ತಂತಮ್ಮ [೧೨]ಕಸವರಮನೆಲ್ಲಮನಾರ[೧೨]ಯ್ದು ಕೊಂಡರ್ ಮತ್ತೆ ವಿದ್ಯುಚ್ಚೋರನುಂ ಹಾರಮಂ ಕೊಂಡು* ಪೋಗಿಯರಸಂಗೊಪ್ಪಿಸಿದೊಡರಸ

೧. ವೊ ಎನೆ ಜವದಂಡನೊಳ್ಳಿತ್ತಾಗಿ ನೆನೆವೆನೆಂದೊಡೆ (ಘ,ಚ,ಛ). ೨. ತ್ತೆನ್ನ ಪೂಣ್ದ ಪ್ರತಿಜ್ಞೆ ಸಂದುದೊ ಸಲ್ಲದೊ ನಿನ್ನಂ ಕೊಲಿಸಿದೆನೊ ಕೊಲಿಸೆನೊ (ಘ,ಚ,ಛ). ೩. ನೆಂದಿಂತಿರ್ವರುಂ (ಘ,ಚ,ಛ). ೪. ಯುಂತುಂ ಕೊಲವೇೞ್ದೊರಂ (ಚ,ಛ), ಯ್ಗಿತಂಕೊಲಲ್ ಪೇೞ್ದರಂ (ಘ). ೫. ಪಾಪ (ಘ,ಚ,ಛ). ೬. + ಜನಂಗಳ (ಘ,ಚ,ಛ). ೭. ೞ್ದಿರಿದುಂಡಿ (ಚ). ೮. ಮನೆ (ಘ,ಚ,ಛ). ೯. ಂ ಮಾಡಿದೆನು (ಘ,ಚ,ಛ). ೧೦. ದೆಲ್ಲವಣ್ಣವಳಿಯದಿ (ಕ,ಗ), ದೆಲ್ಲಮಣ್ಣಮುೞಿಯಲಿ (ಘ,ಚ,ಛ). *–* (ಕ,ಗ) ಪ್ರತಿಗಳಲ್ಲಿಲ್ಲ. ೧೧. ಸಂಗಳಂನಿಂನಿಂಮ ಕಸವರಳ್ನುಂ (ಘ,ಚ,ಛ). ೧೨. ವನಾ (ಘ,ಚ,ಛ).

ನಿಂತೆಂದು ವಿದ್ಯುಚ್ಚೋರನಂ ಬೆಸಗೊಂಡಂ ಮಾಘಮಾಸದಿರು[೧]ಳಿನ[೧] ಸೀತದೊಳ್ ನಾಲ್ಕು ಜಾವಮುಂ ಮೂವತ್ತೆರಡುಂ ಘೋರಮಪ್ಪ ದಂಡಣೆಯನೆಂತು ಸೈರಿಸಿದೆಯೆಂದೊಡಾತನಿಂತೆದರಸಂಗೆ ಪೇಳ್ಗುಂ

ದೇವಾ ಒಂದು ದಿವಸಂ ಸಹಸ್ರಕೂಟ ಚೈತ್ಯಾಲಯಕ್ಕೆ ಕಿಱಿಯಂದೆನ್ನ ನೋದಿಸುವೋಜರುಮಾನುಂ ಪೋಗಿ [೨]ಓಜಂ[೨] ದೇವರಂ ಬಂದಿಸುವನ್ನೆಗಂ ಚರಿತ ಪುರಾಣಂಗಳಂ ವಖ್ಖಾಣಿಸುತ್ತಿರ್ದ ಶಿವಗುಪ್ತರೆಂಬಾಚಾರ್ಯರ ಪಕ್ಕದೆ ಕುಳ್ಳಿರ್ದು ವಖ್ಖಾಣೆಯಂ ಕೇಳುತ್ತಿರ್ಪನ್ನೆಗಂ ನರಕವ್ಯಾವರ್ಣನೆ[೩]ಯನಾ[೩] ಭಟಾರರಿಂತೆಂದು ಪೇಳ್ವುದಂ ಕೇಳ್ದೆಂ ವ್ರತಶೀಲ[೪]ಚಾರಿತ್ರ ಗುಣಂಗಳನಿಲ್ಲದವರುಂ[೪] ಜೀವಂಗಳಂ ಕೊಲ್ವರುಂ ಬೇಂಟೆಯಾಡುವರುಂ ರಾಗದ್ವೇಷ ಲೋಭಂ ಕಾರಣಮಾಗಿ ಪುಸಿ ನುಡಿದು ಜೀವಂಗಳ್ಗೆ ಸಂತಾಪ[೫]ಮಂ ವಧೆಯು[೫]ಮಂ ಮಾಡಿಸು[೬]ವರುಮಾಱಡಿ[೬]ಗೊಳ್ವರುಂ ಕಳ್ವರುಂ ಪೆಱರ ಪೆಂಡಿರೊಳ್ ಮಱ[೭]ವಾಳ್ವರುಮಪರಿಮಿತ ಪರಿಗ್ರಹಮಂ ನೆರಪುವರುಂ ಮತ್ತಂ ಮಧು ಮದ್ಯ ಮಾಂಸಂಗಳುಮುಯ್ದು ಪಾಲ್ಮರದ ಪಣ್ಗಳುಮಾಳಂಬೆಯುಂ[೮] ಸಣಂಬಿನ ಪೂವುಮೆಂದಿವಂ ಸೇವಿಸುವರುಂ ಮ[೯]ತ್ತಮಮೋಘ[೯]ಮುಪೇಯಪೇಯಮಭಕ್ಷ್ಯಭಕ್ಷ್ಯಮೆಂದಿವಱೊಳ್ ನೆಗಳ್ವರುಂ ಪಂಚಮಹಾಪಾತಕಂಗ[೧೦]ಳಂ ಗೆಯ್ದೊರುಮಿವರೆಲ್ಲಂ[೧೦] ನಿವೃತ್ತಿ ಪರಿಣಾಮಮಿಲ್ಲದೆ ಕಾಲಂಗೆಯ್ದೇೞುಂ ನರಕಂಗಳೊಳ್ ಪುಟ್ಟಿ ದುಃಖಂಗಳನೆಯ್ದುವರ್

ಗಾಹೆ ॥ ಅಚ್ಛಿಣಿಮಿಾಳಣ ಮೇತ್ತಂ ಣತ್ಥಿ ಸುಹಂ ದುಖ್ಖಮೇವ ಅಣುಬದ್ಧಂ ।
ಣಿರಯೇ ಣಿರಯಿಯಾಣಂ ಅಹಣ್ಣಿಸಂ ಪಚ್ಚಮಾಣಾಣಂ ॥

ವೃ॥ ಕರಜ ನಿವೇಶಿತ ತೀಕ್ಷ್ಣ ಶಲಾಕಾಃ
ಕ್ರಕಚ ವಿಪಾಟಿತ ಭಿನ್ನ ಶರೀರಾಃ
ನರಕ ಭವೇ ವಿರಸಾ ವಿಷಹಂತೇ
ಚಿರಮಪಿ ತತ್ಕ್ಷಣ ದುಃಖವಿಷಾದಂ ॥

ಮತ್ತಂ

ಕಂ॥ ಇಱಿ[೧೧]ಕಿಱಿದನೊದಱಿ[೧೧](?)ಕೈರಂ
ದಱಿ ಮುಱಿ ನಿಟ್ಟ[೧೨]ಲ್ವನರಿದು[೧೨]ನೆಱ[೧೩][ನೆ]ಡೆ[೧೩]ಗಳ್ ಬಾ
ಯ್ದೆಱೆ[೧೪]ಯಿ[೧೪] ಪೊಸವುಣ್ಗಳೊಳ್ ಪೊಯ್
ಮಱು[೧೫]ಗುವಿನಂ[೧೫] ಲೋಹ[೧೬]ವಾರಿಯಂ[೧೬] ಮಱುಗುವಿನಂ ॥

ಕಡಿ ಕಟಿವಮುನುಡಿ ತೊಡೆಯಂ
ನಡನಡ ನಡುಗುವಿನಮುಡಸಿ ತಡೆಯದೆ ಖಳನಂ
ಪಿಡಿದುಡಿಯೆ ಕಟ್ಟು ಮಿಡ ಮಿಡ
ಮಿಡುಕುವಿನಂ ಬಡಿಯೊಳೊಡೆಯೆ ಪೊಡೆ ಪೆಡತಲೆಯಂ ॥

---

೧. ಳೀ (ಕ,ಖ,ಗ). ೨. (ಘ,ಚ,ಛ) ಗಳಲ್ಲಿಲ್ಲ. ೩. ಯೆಡೆಯಂ (ಘ,ಚ,ಛ). ೪. ಗುಣಂಗಳಿಲ್ಲವ (ಕ,ಖ,ಗ). ೫. ಮುಮಾಪತ್ತು (ಘ,ಚ,ಛ). ೬. ವಾಡಿ (ಕ.ಗ). ೭. + ಚೆ[illegible]ಯ್ಯುಂ (ಘ,ಚ,ಛ). ೮. ತ್ತಂಗವ್ಯಾಗಮ್ಯ (ಘ,ಚ,ಛ). ೯. + ವಾಚ್ಯಾವಾಚ್ಯ (ಘ,ಚ,ಛ). ೧೦. ಳ್ ಮೊದಲಾಗೊಡೆಯಪಲತೆಱದ ಪಾಪದ ಫಲದಿಂದೆಯ್ದುವರೆಲ್ಲಂ (ಘ,ಚ,ಛ). ೧೧. ಕಡಿನೊಡಿಱಿ (ಘ,ಚ,ಛ). ೧೨. ಲ್ವನಳಿದು (ಘ,ಚ,ಛ). ೧೩. ರಡೆ (ಕ,ಖ,ಗ). ದೆಡೆ (ಘ,ಚ,ಛ). ೧೪. ದ (ಘ.ಚ,ಛ). ೧೫. ಗಿದ (ಘ,ಚ,ಛ). ೧೬. ದ್ರವಂಗಳಂ (ಘ,ಚ,ಛ).

[೧]ಬಡಿ ಕೊಲ್ ಕಟ್ಟಱಿ[೧] ಮುಱಿ [೨]ಕಡಿ[೨]
ನಡುವಂ [೩]ಕೊ[೩]ಱಿ [೪]ಕುತ್ತಿ[೪] ಕರುಳ್ಗಳಂ ತೆಗೆ ನೊಗಮುಂ
ಸುಡು ಪಿಡಿ ಬಡಿ ನಿಮಿರ್ದಿಱಿ ಬಯ್
ಕಡಂಗಿ ನುಂಗೆಂದು ಮುಸುಱಿ ನಾರಕರಾಗಳ್ ||

ಮತ್ತಂ ಕೊಂತಂಗಳಿಂದಮಿಟ್ಟಿಗಳಿಂ[೫]ದಂ ಕುತ್ತಿಸಿಱಿಂದಂ[೫] ಕುರುಳ್ಮಾಲೆಗಳ್ ನೆಲದೊಳ್ ಸುರಿಯೆ ಕುತ್ತುವುದುಂ [೬]ಮು[೬]ಟ್ಟಿಗಳೊಳಿಟ್ಟು ತೆಗಪುವುದುಂ ಕರಗಸಂಗಳಿಂದಂ ಮರನಂ ಪೋೞ್ವಂತೆ ಕೆಯ್ಯಂ ಕಾಲನಗಲ್ಚಿ ಪಿಡಿದಡಸಿ ಕ[೭]ಟ್ಟಿಯುದ್ದಂಬಿಡಿದು ಬಾೞ್ವುದು[೭]ಮಿಂತಿವು ಮೊದಲಾಗೊಡೆಯ ದುಃಖಂಗಳಂ ಕಣ್ಣೆಮೆಯಿಕ್ಕುವನಿತು ಪೊೞ್ತುಪ್ಪೊಡಮುಸಿರ್ [೮]ಪತ್ತಿಲ್ಲದುತ್ಕೃಷ್ಟ[೮]ದಿಂದಮೇೞನೆಯ ನರಕದೊಳ್ ಮೂವತ್ತುಮೂಱು ಸಾಗರೋಪ[೯]ಮಕಾಲಂ[೯]ಬರೆಗಂ ದುಃಖಂಗಳನೆಯ್ದುವರ್

ಮತ್ತಂ ದಾನ ಪೂಜೆ ಶೀಲೋಪವಾಸಮೆಂದಿಂತು ಚತುರ್ವಿಧಮಪ್ಪ ಶ್ರಾವಕ ಧರ್ಮದೊಳ್ ನೆಗೞ್ವರುಂ [೧೦]ತಪಂಗೆಯ್ವರುಂ[೧೦] ಸ್ವರ್ಗಾಪವರ್ಗ ಸುಖಂಗಳನೆಯ್ದುವರೆಂದಿಂತು ಪೇೞೆ ಕೇಳ್ದು ಭಟಾರರ ಪಕ್ಕದೆ ಆನಣುವ್ರತ ಗುಣವ್ರತ ಶಿಕ್ಷಾವ್ರತಮೆಂದಿಂತು ದ್ವಾದಶ ವಿಧಮಪ್ಪ ಶ್ರಾವಕ ಧರ್ಮಮುಮನರ್ಹಂತ ಪರಮ ದೇವರೆ ದೇವರ್ ಕೊಲ್ಲದುದೆ ಧರ್ಮಂ ಬಾಹ್ಯಾಭ್ಯಂತರ ಪರಿಗ್ರಹಮಿಲ್ಲದುದೆ ತಪಮರ್ಹಂತ ಪರಮ ದೇವರಾಗಮದೊಳ್ ಪೇೞ್ಪಟ್ಟ ಜೀವಾಜೀವ ಪುಣ್ಯಪಾಪಾಸ್ರವ ಸಂವರ ನಿರ್ಜರ[೧೧]ಬಂಧಮೋಕ್ಷ[೧೧]ಮೆಂದಿಂತು ನವಪದಾರ್ಥಂಗ[೧೨]ಳುಮಂ[೧೨] *ಪಂಚಾಸ್ತಿಕಾಯಂಗ[೧೨]ಳುಮಂ[೧೨]* ಷಡ್ದ್ರವ್ಯಂಗ[೧೨]ಳುಮಂ[೧೨] ನಂಬುವುದು ಸಮ್ಯಕ್ತ್ವಮೆಂಬುದಕ್ಕುಮಾ ಸಮ್ಯಕ್ತ್ವದತಿಚಾರಂಗಳ್ ಶಂಕಾದ್ಯಷ್ಟಮಳಂಗಳುಮೆಂಟು ಮದಂಗಳುಂ ಮೂಱು ಮೂಢಮುಮಾಱನಾಯತನ ಸೇವೆಗಳುಮೆಂದಿಂತಿಪ್ಪತ್ತಯ್ದಕ್ಕುಮವಂ ಪಿಂಗಿಸಿ ನಿಶ್ಶಂಕಾದ್ಯಷ್ಟ ಗುಣಂಗಳಿಂ ಕೂಡಿದ ಶುದ್ಧಮಪ್ಪ ಸಮ್ಯಕ್ತ್ವ ಪೂರ್ವಕಂ ವ್ರತಂಗಳನೇಱಿಸಿ[೧೩]ಕೊಂಡು ಮತ್ತೆ ನರಕಂಗಳ ದುಃಖಂಗಳಂ ಕೇಳ್ದವಱ ಶತಸಹಸ್ರ ಭಾಗಕ್ಕಪ್ಪೊಡಮಾ ದುಃಖ[೧೪]ಮಿಲ್ಲೆಂ[೧೪]ದು ಮನದೊಳ್ ಬಗೆದು ಮೂವತ್ತೆರಡುಂ ದಂಡಣೆಗಳಂ ಸೈರಿಸಿದೆನೆಂದೊಡರಸಂ ಕೇಳ್ದು ನಿನಗೊಸೆದೆಂ ಬೇಡಿಕೊಳ್ ನಿನ್ನ ಬೇಡಿದುದೆಲ್ಲಮಂ ಕುಡುವೆನೆಂದೊಡೆ ಪೆಱ[೧೫]ತೇ[೧೫]ನುಮನೊಲ್ಲೆನೆನ್ನ ಕೆಳೆಯನಪ್ಪ ಯಮದಂಡಂಗೆ ಕ್ಷಮಿಯಿ[೧೬]ಸುವುದನೆ ಬೇಡಿದೆ[೧೬]ನೆಂದೊಡರಸನಿಂತೆಂದು ಬೆಸಗೊಂಡಂ ಯಮದಂ[೧೭]ಡಂ ನಿನಗೆಂತು ಕೆಳೆಯನಾದಂ[೧೭] ಮತ್ತೆ ನೀಂ ಶ್ರಾವಕವ್ರತಂಗಳಂ ಕೈಕೊಂಡೆಯಪ್ಪೊ

---

೧. ಪಿಡಿಯಿಱಿ (ಘ,ಚ,ಛ). ೨. ತಱಿ (ಖ). ೩. ಕಾ (ಕ,ಖ,ಗ). ೪. (ಕ,ಖ,ಗ) ಗಳಲ್ಲಿಲ್ಲ. ೫. ದೂಬಸಿಱಿಂದಂ ಬಸಿಱಿ (ಖ), ಪಂಬಸಿಱಿಂ (ಘ,ಚ,ಛ). ೬. ಇ (ಕ,ಗ), ಮಿ (ಖ). ೭. ಟ್ಟುವುದು (ಘ,ಚ,ಛ). ೮. ಪತ್ತಿಲ್ಲ ದುಷ್ಕೃತ (ಕ,ಗ), ಪತಮಿಲ್ಲುತ್ಕೃಷ್ಟ (ಘ,ಚ,ಛ). ೯. ಮಾಯುಷ್ಯಂ (ಕ,ಗ). ೧೦. (ಕ,ಗ)ಗಳಲ್ಲಿಲ್ಲ. ೧೧. ಧರ್ಮ (ಕ,ಖ,ಗ). ೧೨. ಳ್ಗಂ (ಘ,ಚ,ಛ). *-* (ಕ,ಖ,ಗ)ಗಳಲ್ಲಿಲ್ಲ. ೧೩. + ಕೈ (ಕ,ಖ,ಗ). ೧೪. ಮಲ್ತೆಂ (ಘ,ಚ), ೦ ದುಃಖಮಲ್ತೆಂ (ಛ). ೧೫. ದೇ (ಖ). ೧೬. ಸಿಂನಿಮ್ಮಡಿಯದನೆ ಬೇಡಿಕೊಂಡೆ (ಘ,ಚ,ಛ). ೧೭. ಡಂಗಂ ನಿನಗಮೆಂತು ಕೆಳೆಯಾಯ್ತು (ಘ,ಚ,ಛ).

ಡೇ[೧]ಕೆ ಕ[೧]ಳ್ವೆಯೆಂದು ಬೆಸಗೊಂಡೊಡಾತನಿಂತೆಂದಂ ಯಮದಂಡನೆನಗೆ ಕೆಳೆಯನಪ್ಪುದುಮಂ ನಿಮ್ಮ ಪೊೞಲ ಕಸವರಮಂ ಕಳ್ದುದರ್ಕೆ ಕಾರಣಮುಮಂ ಪೇೞ್ವೆಂ ಕೇಳರಸಾ ಎಂದು ವಿದ್ಯುಚ್ಚೋರನಿಂತೆಂದು ಪೇೞಲ್ತೊಡಂಗಿದಂ

ಈ ಜಂಬೂದ್ವೀಪದ ಭರತ ಕ್ಷೇತ್ರದೊಳ್ ತಿಲಕಮನೆ ಪೋಲ್ವುದು ದಕ್ಷಿಣಾಪಥದೊಳಾಭೀರಮೆಂಬುದು ನಾಡಲ್ಲಿ [೨]ವರ್ಣೆ[೨]ಯೆಂಬ ತೊಱೆ[೩]ಯಾ[೩] ತಡಿಯೊಳ್ ವೇಣಾತಟಮೆಂಬುದು ಪೊೞ[೪]ಲದು ಪೊೞಲ ಗುಣಂಗಳಿನಾ[೪]ದಮಾನುಂ ರಮ್ಯಮಪ್ಪುದು ಸ್ವರ್ಗಮನೆ ಪೋಲ್ವುದದನಾಳ್ವೊಂ ಜಿತಶತ್ರುವೆಂಬೊನರಸನಾತನ ಮಹಾದೇವಿ ವಿಜಯಮತಿ[೫]ಯೆಂಬೊಳಾ ಇರ್ವರ್ಗ್ಗಂ ಮಗನೆನಾಂ ವಿದ್ಯುಚ್ಚೋರನೆಂಬೆಂ ಮತ್ತಾ ಪೊೞಲೊ[೬]ಳ್ ಯಮಪಾಶನೆಂಬೊಂ ತಳಾಱ[೬]ನಾತನ ಪೆಂಡತಿ [೭]ನಿಜಗುಣದೇವತೆ[೭]ಯೆಂಬೊಳಾ ಇರ್ವರ್ಗ್ಗಂ ಮಗನೀತಂ ಯಮದಂಡನೆಂಬೊಂ ಮತ್ತಾಮಿ[೮]ರ್ವೆಮುಂ[೮] ಸಮಾನವಯಸರೆಮಯ್ದಾಱು ವರ್ಷದ ಪ್ರಾಯದಂದು ಶ್ರಾವಕನಪ್ಪ ಸಿದ್ಧಾರ್ಥನೆಂಬುಪಾಧ್ಯಾಯನ ಪಕ್ಕದೆ ಇರ್ವರುಮನೋದಲಿಟ್ಟೊಡೇೞೆಂಟು ವರುಷದೊಳಗೆ ವ್ಯಾಕರಣಂ ಪ್ರಮಾಣಂ ಛಂದಮಲಂಕಾರಂ ನಿಘಂಟು ಕಾವ್ಯಂ ನಾಟಕಂ ಸಾಮುದ್ರಿಕಂ ವಾತ್ಸ್ಯಾಯನಂ ಶಾಲಿಹೋತ್ರಂ ಪಾಲಕಾಪ್ಯಂ [೯]ಚಾಣಕ್ಯಂ ವೈದ್ಯಂ[೯] ಮೊದಲಾಗೊಡೆಯ ಶಾಸ್ತ್ರಂಗಳನೆಲ್ಲಮನಿರ್ವರುಂ ಕಲ್ತು ಬೞಿ[೧೦]ಕ್ಕೀತಂ ತಳಾಱನ ಮಗನಪ್ಪುದಱಿಂ ತನಗೆ ತಕ್ಕ ಕಳ್ಳರನಾ[೧೦]ರಯ್ದು ತೆಱನಂ ಪೇೞ್ವ ಸುರಖಮೆಂಬೋದಂ ಕಲ್ತೊನಾನುಂ[೧೦] ಕಳ್ವಪಾಯಮಂ ಪೇೞ್ವ ಕರಪಟ ಶಾಸ್ತ್ರಮಂ ಕಲ್ತೆನಿಂತೆಮಗನ್ಯೋನ್ಯ ಪ್ರೀತಿಯಿಂದಂ ಕಾಲಂ ಸಲೆ

ಮತ್ತೊಂದು ದಿವಸಮಿರ್ವರುಂ ವನಕ್ರೀಡೆಯಾಡಲೆಂ[೧೧]ದಿಂ[೧೧] ಪ್ರೋಷಮಮೆಂಬ ವನಕ್ಕೆ ಪೋಗಿಯಲ್ಲಿಯಶೋಕ ಪುನ್ನಾಗ ವಕುಳ ತಿಳಕ ತಮಾಳ ಚಂಪಕ ಕ್ರಮುಕ ನಾಳಿಕೇರ ಖರ್ಜೂರ ಜಂಬು ಜಂಬೀರ ಪನಸ ದಾಡಿಮ ಕದಳೀ ದ್ರಾಕ್ಷಾ ಸಹಕಾರಂ ಮೊದಲಾಗೊಡೆಯ ಪಲವುಂ ತೆಱದ ವೃಕ್ಷ ಜಾತಿಗಳಿಂದಂ ಕಿಕ್ಕಿಱಿಗಿಱಿದಿರ್ದ ನಂದನವನದೊಳಿರ್ವ[೧೨]ರುಮುಳಿಸೆಂ[ಡನಾ]ಡುತ್ತಿ[ರ]ಲೋಕ[ನ][೧೨] ವಿದ್ಯೆಯನೀತಂ ಕಲ್ತನಪ್ಪುದಱಿಂದೆಲ್ಲಿಯುಳಿದೊಡಂ ಕಾಣಲಾಗದೀತನಂ ನೀಡುಮಱಸಿ ಕಾಣದೆ ದೆಸೆಗೆಟ್ಟು ಬೇಸತ್ತಾನಿಂತೆಂದೆನಕ್ಕುಂ ಮಗನೆ ನೀಂ ತಳಾಱನಪ್ಪಂದು ನಿನ್ನ ಕಾಪಿನೊಳ್ ಕಳ್ದ ನಿನ್ನಂ [೧೩]ಕೊಲಿಸ[೧೩]ದಾಗಳೇನಾಯ್ತೆಂದು ನುಡಿದೊಡೀತನುಮಿಂತೆಂದನಕ್ಕುಂ ಮಗನೆ [೧೪]ನೀನೆನ್ನ ತಳಾಱು[೧೪]ಗೆಯ್ವಂದು ಕಳ್ದೊಡೆ

---

೧. ಕೇ (ಕ,ಗ), ಕ (ಖ). ೨. ವೇರ್ಣೆ (ಖ), ವೆಂಣ್ಣೆ (ಘ,ಚ,ಛ). ೩. ಯ (ಕ,ಖ,ಗ), ದಱ (ಚ). ೪. ಲಾ (ಘ,ಚ,ಛ). ೫. + ಮಹಾದೇವಿ (ಕ,ಖ,ಗ). ೬. ಳಿ ತಳಾಱಂ ಜವದಂಡಪಾಶನೆಂಬೊ (ಘ,ಚ,ಛ). ೭. ನಿಜಯ ಗುಣವೇವತೆ (ಖ), ಜಗುನೆ (ಘ,ಚ,ಛ). ೮. ರ್ವರುಂ (ಕ,ಗ), ರ್ಬ್ಬರೊಂ (ಘ,ಛ). ೯. ನರವೈದ್ಯಂ ಮಂತ್ರವಾದಂ ಜ್ಯೋತಿಷಂ (ಘ,ಚ,ಛ). ೧೦. ರೈದುದಂ ಪೇಳ್ವಾ ಸುರಂಬಮೆಂಬೊಂದಂ ಕಲ್ತನಾಂ (ಘ), ರಯ್ವುದಂ ಪೇಳ್ವಾಸುರಂಖಮೆಂಬೋದಂ ಕಲ್ತನಾಂ (ಚ,ಛ). ೧೧. ದು ಇಂದಿಂ (ಕ,ಖ,ಗ). ೧೨. ರುಂ ಮುಳಿಸೆಂಡೆಯಾಡುತ್ತಿರೆ ಲೋಕ (ಕ,ಗ), ರುಂ ಮುಳಿಸಿಂದಿಯಾಡುತ್ತಿರೆ ಲೋಕ (ಖ), ರು ಮು ಮುಳಿಸುಟ್ಟೆಲೋಡುತ್ತೀ (ಘ), ರು ಮುಳಿಸುಟ್ಟೆಲಾಡುತ್ತೀ (ಚ,ಛ). ೧೩. ಕೋಪಿಸಿ (ಕ,ಗ). ೧೪. ನಿನ್ನನೆನ್ನ ತಳಾಱಿಕೆ (ಘ,ಚ,ಛ).

ನಿನ್ನಂ ಪಿಡಿದುಡಿಯೆ ಕಟ್ಟಿ ಕಳ್ಳರ ದಂಡಣೆಯಿಂ ದಂಡಿಸದಾಗಳೇನಾಯ್ತೆಂದು ನುಡಿದೊಡೀ ನುಡಿಯಂ ಮಱಿಯಲ್ವೇಡೆಂದಿರ್ಪರುಮೋರೊರ್ವರ್ಗಂ ಮೂದಲಿಸಿ ಪ್ರತಿಜ್ಞೆಗೆಯ್ದು ಕೆಲಕಾಲದಿಂದೆನ್ನ ತಂದೆಯೆನಗೆ ರಾಜ್ಯ ಪಟ್ಟಂಗಟ್ಟಿ ಶ್ರುತ ಸಾಗರ ರೆಂಬ ಭಟಾರರ ಪಕ್ಕದೆ ತಪಂಬಟ್ಟನೀತನ ತಂದೆಯುಂ ತನ್ನ ಸಂತಾನಮನೀತಂಗೆ ಕೊಟ್ಟರಸನೊಡನೆ ತಪಂಬಟ್ಟಂ ಮತ್ತಾನುಂ ರಾಜ್ಯಂಗೆಯ್ಯುತ್ತಿರೆ ಈತನುಮಾ ಪೊಟಲೊಳ್ ತಳಾಱುಗೆಯ್ಯುತ್ತಿರ್ಕುಮಿಂತು ಸುಖದೊಳಿರ್ಪಗ್ಗಂ ಕಾಲಂ ಸಲೆ ಮತ್ತೊಂದು ದಿವಸಮಿಾತಂ ತನ್ನ ಮನದೊಳಿಂತೆಂದು ಬಗೆ[1]ದ[1]ನೆನ್ನರಸಂ ಕಳ್ಳ ನಾನುಮಿಾ ಪೊಟಲೊಳ್ ತಳಾ[2]ಱುಗೆಯ್ವೆನಿದು ಕಜ್ಜಮೊ[2]ಳ್ಳಿತ್ತಲ್ತೆಂದೆನಗಂಜಿ ನಾಡಂ [3]ಬಿಟ್ಟು[3] ಬಂದು ನಿಮಗಾಳಾದನಾನುಮಿಾತನನೆನ್ನಾಳ್ವ ನಾಡೆಂಟು ದೆಸೆಯ ಗ್ರಾಮ ನಗರ ಖೇಡ ಖರ್ವಡ ಮಡಂಬ ಪತ್ತನ ದ್ರೋಣಾಮುಖಂಗಳೊಳಾರಯ್ದುಯುಂ ಕಾಣದೆ ಪರಮಂಡಲಂಗಳೊಳಮಾರಯ್ದುಯುಂ ಕಾಣದಿಲ್ಲಿಗಾರಯ್ಯಲಟ್ಟಿದೊಡೆ ಚರಪುರುಷರಾರಯ್ದು ಕಂಡು ಬಂದೆನಗಿಂತೆಂದು ಪೇೞ್ದರ್

ದೇವಾ ಮಿಥಿಳೆಯೆಂಬ ಪೊಟಲದನಾಳ್ವೊಂ ಪಾಮರಥನೆಂಬರಸಂಗೆ ಯಮದಂಡಂ ಪೋಗಿಯಾಳಾಗಿ ಪೊಟಲ ಕಾಪಂಬೆತ್ತು ತ[4]ಳಾಱ[4]ನಾಗಿ ಸುಖದೊಳಿರ್ದೊನೆಂದು ಪೇೞ್ದೊಡಾ ಮಾತನಾಂ ಕೇಳ್ದು ಪುರುಷೋತ್ತಮನೆಂಬ ಮಂತ್ರಿಗೆ ಮಿಥಿಳೆಯೆಂಬ ಪೊಟಲ್ಗಾನಾರುಮಱಿಯದಂತಿರೆ ಪೋಗಿ ಯಮದಂಡನ[5]ನೊ[5]ಡಗೊಂಡು ಬಂದಪೆನೆಂದು ಪೇೞ್ದು ವಜ್ರಸೇನನೆಂಬ ಪೆರ್ಗಡೆಯಂ ಕರೆಯಿಸಿ ಆನೊಂದು ಮನೆವಾೞ್ತೆಗೆ ಪೋಗಿ ಬಂದಪೆನೆನ್ನ ಬರ್ಪನ್ನೆಗಂ ರಾಜ್ಯಮಂ ಪ್ರತಿಪಾಲಿಸುತ್ತಿರೆಂದು ಕಲ್ಪಿಸಿ ಸಮಸ್ತ ರಾಜ್ಯ ಭಾರಮಂ ಸಮರ್ಪಿಸಿ ಅರ್ಧರಾತ್ರದಾಗಳ್ ಕಪ್ಪಡಮಂ ಪಱಿದುಟ್ಟು ಬೞಿಕಾರುಮಱಿಯಲೀಯದೊರ್ವನೆ ಪೊಱಮಟ್ಟು ಬಂದೀ ಪೊಟಲಂ ಪೊಕ್ಕು ಪ್ರತಿಜ್ಞೆ ಕಾರಣಮಾಗಿ ಕಸವರಮಂ ಕಳ್ದೀತನಂ ಕೊಲಿಸುವಂತು ಮಾಡಿದೆನಿದು ಕಳ್ದುದರ್ಕೆ ಕಾರಣಮಿಾತನುಮೆನಗೀ ಪಾಂಗಿನೊಳ್ [6]ಮಿತ್ರ[6]ನೆಂದು ಪೇೞ್ದು ಮತ್ತಮಿಂತೆಂದಂ ನಿಮ್ಮ ದೇವತಾ[7]ಧಿಷ್ಠಿ[7]ತಮಪ್ಪ ಸರ್ವರುಜಾಪಹಾರಮೆಂಬ ಹಾರಮಧಿಗಮ ಸಮ್ಯಗ್ದೃಷ್ಟಿಯೆನಪ್ಪುದಱಿಂದೆನ್ನ ಕೆಯ್ಗೆವಂದುದುೞಿದ ಮಿಥ್ಯಾದೃಷ್ಟಿಗಳ ಕೆಯ್ಗೆ ವಾರದೆಂದೊಡರಸಂ ತನ್ನ ಸಭೆಯೊಳಿರ್ದ ನೆರವಿಗೆಲ್ಲಂ ಹಾರಂ ಬಂದ ತೆಱನನಿಂತೆಂದು ಪೇೞಲ್ ತೊಡಗಿದೊಂ

ಧನ್ವಂ[8]ತರಿ[8] ವಿಶ್ವಾನುಲೋಮರ್ಕಳ ಕ[9]ರ್ಥೆ[9]ಯಂ ಮೊದಲಿಂ ತಗುಳ್ದು ಪೇೞುತ್ತುಮಿಂತೆಂದನೆಮ್ಮ ಸಂತತಿಯ ಪದ್ಮರಥನೆಂಬರಸನೊಂದು ದಿವಸಂ ವಾಸುಪೂಜ್ಯತೀರ್ಥಕರ ಪರಮದೇವರಂ ಬಂದಿಸಲ್ ಪೋಗುತ್ತಿರ್ದೊನನೆಡೆಯೊಳಚ್ಯುತೇಂದ್ರನುಂ ವಿಶ್ವಾನುಲೋಮ[10]ಂ ಚರ[10]ಂ ನಪ್ಪ ವಾಹನದೇವನುಮಿಂತಿರ್ವರುಂ ಕಂಡು ಅಚ್ಯುತೇಂದ್ರಂ ವಾಹನದೇವನನಿಂತೆಂದನೀತಂ [11]ಅ[11]ಧರ್ಮಿಯಿಂದೆ ಧರ್ಮಮಂ ಕೆಯ್ಕೊಂಡು ವಾಸುಪೂಜ್ಯತೀರ್ಥಕರ ಪರಮದೇವರಂ ಬಂದಿಸಿದಲ್ಲ

---

೧. ವ (ಕ,ಖ,ಗ). ೨. ಜನೆಸೊ (ಘ,ಚ,ಛ). ೩. ಬಿಸುಟ್ಟು (ಘ,ಚ,ಛ). ೪. ಳವರ (ಚ). ೫. ನಾರಯ್ದೊ (ಘ,ಚ,ಛ). ೬. ಕೆಳೆಯ (ಘ,ಚ,ಛ). ೭. ರಕ್ಷಿ (ಘ,ಚ,ಛ). ೮. ತ್ರಿ (ಕ,ಖ,ಗ). ೯. ಡೆ (ಛ). ೧೦. (ಕ,ಖ)ಗಳಲ್ಲಿಲ್ಲ, (ಚ)ದಲ್ಲಿ ತ್ರುಟಿತ. ೧೧. ನವಲ (ಘ,ಚ,ಛ).

ದುಣ್ಣೆನೆಂದಾಗ್ರಹಂಗೊಂಡು ಚಂಪಾನಗರಕ್ಕೆವೋದಪ್ಪೊ ನೀತನಂ ಪೋಗಲೀಯದೆ ಮಗುೞ್ಚಲಾರ್ಪೊಡೆ ಮಗುೞ್ಚೆಂದು ನುಡಿದೊಡೆ ವಾಹನದೇವನುಂ ತನ್ನಾರ್ಪ ತೆಱದಿಂದೆಲ್ಲಮೆನಿತಾನುಂ ತೆಱದುಪಸರ್ಗಂ ಗೆಯ್ದು ಮಗುೞ್ಚಲಾಱದೆ ಬೇಸತ್ತುೞಿದೊಡೆ ಅಚ್ಯುತೇಂದ್ರಂ ಪದ್ಮರಥಂಗೊಸೆದು ತನ್ನ ತೊಟ್ಟ ಸರ್ವರುಜಾಪಹಾರಮೆಂಬ ಹಾರಮನಾತನ ಕೊರಲೊಳ್ ತಾ[೧]ನೆ ಕಟ್ಟಿ[೧] ಪೊಗೞ್ದು ಪೂಜಿಸಿ ಪೋದೊನಿಂತೀ ಪಾಂಗಿನೊಳಿಮಗೀ ಹಾರಂ ಸಂತತಿಯಿಂ ಬಂದುದೆಂದು ಪೇೞ್ದಿರ್ದ ತದನಂತರಂ

ಇರ್ವ[೨]ರ್ ಪರಿವ್ರೊಟ್ಟಿ[೨]ಯವರೋಲೆಯಂ ಕೊಂಡು ಬಂದರಸನ ಮನೆಯ ಬಾಗಿಲೊಳ್ ನಿಂದು ಪಡಿಯಱಂಗೆ ಪೇೞ್ದೊಡೆ ಪಡಿಯಱಂ ತಮ್ಮರಸಂಗೆ ಪೇೞ್ದೊಡರಸನನುಮತದಿಂದರಮನೆಯಂ ಪೊಕ್ಕಾಸ್ಥಾನಮಂಟಪದೊಳಿರ್ದ ವಿದ್ಯುಚ್ಚೋರನಂ ಕಂಡು[೩] ಪೊಡೆವಟ್ಟಾತನ ಮುಂದೋಲೆಯನಿಕ್ಕಿದಾಗಳ್ ಸಂಧಿವಿಗ್ರಹಿ ಓಲೆಯಂ ಕೊಂಡರಸನ ಮುಂದಿಂತೆಂದು ಬಾಚಿಸಿದಂ[೪] ವಿದ್ಯುಚ್ಚೋರ ಪರಮಸ್ವಾಮಿಗೆ ಮಂತ್ರಿ ಪುರುಷೋತ್ತಮನುಂ ಪೆರ್ಗಡೆ ವಜ್ರಸೇನನುಂ ಸಾಷ್ಟಾಂಗಮೆಱಗಿ ಪೊಡೆವಟ್ಟು ಕಾರ್ಯಮಂ ಬಿನ್ನವಿ[೫]ಪ್ಪರ್ ತಾ[೫]ಮುಂ ಪಲವು ದಿವಸಂ ಪೋಗಿರ್ದರ್ ಪೆಱ[೬]ತ[೬]ಣ ಮನೆವಾೞ್ತೆಯಂ ಮಱೆದಿರ್ದರ್ ತಾಮಿಲ್ಲದೆ ರಾಜ್ಯ[೭]ಮಂ ಪ್ರತಿಪಾಲಿಸುವೊರಾರುಮಿ[೮]ಲ್ಲೀಯೋ[೮]ಲೆಯಂ [೯]ಕಾಣಲೊಡಂ[೯] ತಡೆಯದೆ ಪೊಱಮಟ್ಟು ಬೇಗಂ ಬರ್ಕೆಂದು ಬಾಚಿಸಿದುದಂ ವಾಮರಥಂ ಕೇಳ್ದು ಮುನ್ನೀತನ ಪೇೞ್ದುದುಮೋಲೆಯ ಮಾತುಮೊಂದಾದುದೆಂದು ಸಂದೇಹಮಿಲ್ಲದಾಗಳ್ ನಂಬಿ ಈತಂ ಮಂಡಳಿಕನೆಂದಱಿದು ತನ್ನ ಸಿಂಹಾಸನದೊಳೋರಂತಪ್ಪಾಸನಮ[೧೦]ನಿಕ್ಕಲ್ವೇೞ್ದಿರಿಸಿ ಇಂತೆಂದನೆನ್ನ[೧೦] ತಂಗೆಯ ಮಗನಯ್ ಸೋದರದಳಿಯನಯ್ ನಿನಗೆನ್ನ ಮಕ್ಕಳಂ ಶ್ರೀಮತಿ,ವಸುಮತಿ,ಗುಣಮತಿ,ಸುಲೋಚನೆ,ಸುಪ್ರಭೆ,ಸುಕಾಂತೆ,ಸುಶೀಲೆ,ಮನೋಹರಿ,ಯೆಂಬೆಣ್ಬರುಂ ಕನ್ನೆಯರತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯರ್ ನವಯೌವನೆಯರಕ್ಷ[೧೧]ರಾಲೇಖ್ಯ[೧೧] ಗಣಿತ ಗಾಂಧರ್ವ[೧೨] ನೃತ್ಯ[೧೩] ಚಿತ್ರಕರ್ಮ ಪತ್ರಚ್ಛೇದ್ಯಮೆಂದಿವು ಮೊದಲಾಗೊಡೆಯ ಚತುಷ್ಷಷ್ಟಿ ಕಲೆಗಳೊಳಾದಮಾನುಂ ಕುಶಲೆಯರ್ ಪರಮಂಡಲಿಕರ್ ಪಲರ್ ಪಾಗುಡಂಗಳುಮೋಲೆಗಳುಂ ಪೆರ್ಗಡೆಗ[೧೪]ಳುಮ[೧೪]ನನವರತಂ ಕೂಸುಗಳಂ ಬೇಡಿಯಟ್ಟುತ್ತಿರ್ಪರವರಾರುಮಂ ನಾಂ ಮೆಚ್ಚದೆ ಕುಡದಿ[೧೫]ನ್ನೆ[೧೫]ಗಮಿಂತಿವರ್ಗಳಂ ತಾಂಗಿರ್ದೆನೀ ಕನ್ಯಾರತ್ನಂಗಳ್ಗೆ ನೀನೆ ಯೋಗ್ಯನಯ್ ನಿನಗೆಣ್ಬರುಮಂ ಕೊಟ್ಟೆನ್ ಮದುವೆನಿಲ್ಲೆಂದೊಡಾತನಿಂತೆಂದನಾನೊರ್ವಳ್ಗೆ ಬೇಂಟಂಗೊಂಡಿರ್ದೆನಿವರಂ ಕೊಂಡೇವೆನೆಂದೊಡರಸನಾರ್ಗೆ ಬೇಂಟಂಗೊಂಡಿರ್ದೆಯೆಂದು ಬೆಸಗೊಂಡೊಡೆ ಮುಕ್ತಿಶ್ರೀಯೆಂಬೊಳ್ಪೆಂಡತಿಗೆ ಬೇಂಟಂಗೊಂಡಿ

೧. ನಿಕ್ಕಿ (ಕ,ಖ). ೨. ರೊಟ್ಟಿಯನೇಱಿ (ಘ,ಚ,ಛ). ೩. + ಸಾಷ್ಟಾಂಗಮೆಱಗಿ (ಘ,ಚ,ಛ). ೪. + ಸ್ವಸ್ತಿ ಶ್ರೀಮತ್ (ಘ,ಚ,ಛ). ೫. ಕ್ಕಿ ಮತ್ತಪ್ಪುದುಂ ಅ (ಕ,ಗ). ೬. ಗ (ಘ,ಚ,ಛ). ೭. +ತಂತ್ರ (ಘ,ಚ,ಛ). ೮. ಲ್ಲಿಂದೋ (ಕ,ಖ,ಗ) ೯. ಕಂಡಾಗಡೆ (ಘ,ಚ,ಛ). ೧೦. ನೇಱಿಕ್ಕಲ್ವೇೞ್ದಿಂತೆಂದಂ ನೀನೆನ್ನ (ಘ,ಚ,ಛ). ೧೧. ರ ಲೆಕ್ಕ (ಕ,ಗ). ೧೨. + ಗೀತ (ಘ,ಚ,ಛ). ೧೩. + ವಾದ್ಯ (ಘ,ಚ,ಛ). ೧೪. ಳ್ಗೆ (ಘ,ಚ,ಛ). ೧೫. ೞ್ದಿನನ್ನೆ (ಕ,ಖ,ಗ).

[೧]ರ್ದೆ[೧]ನಾಕೆಯಂ ಮದುವೆ ನಿಲಲ್ವೇೞ್ಕುಮೆಂದು ಪರಿಚ್ಛೇದಿಸಿ ನುಡಿದು ಮತ್ತಮಿಂತೆಂದನೆನ್ನ ಕೆಳೆಯನನೆನಗೊಪ್ಪಿಸಲ್ವೇೞ್ಕುಮೆಂದೊಡರಸನು[೨] ಮೊಪ್ಪಿಸಿದೆನೆಂದೊಡೆ ಅರಸನಂ[೨] ಬೀೞ್ಕೊಂಡು ಯಮದಂಡ ಪುರಸ್ಸರಮಿರ್ವರುಮೊಟ್ಟಿಯನೇಱಿ ತುರಿಪದಿಂ ಕತಿಪಯ ದಿವಸಂಗಳಿಂ ವೇಣಾತಟ[೩]ಮನೆಯ್ದಿ ಪೊಱವೊೞಲೊಳಿರ್ದು ಪೇೞ್ದೊಟ್ಟಿಯಷ್ಟಶೋಭೆಯಂ ಮಾಡಿಸಿ ಮಂತ್ರಿಮಹತ್ತರ ಪರಿವಾರ ಸಾಮಂತ [೪]ಮಹಾಸಾಮಂತರುಂ[೪] ಪೆಂಡವಾಸದ ಸೂಳೆಯರುಂ [೫]ಪೊೞಲ ಜನಮೆಲ್ಲಮಿದಿರಂ ಬಂದು ಕಂಡು ಪೊಡೆವಟ್ಟು ಸೇಸೆಗಳನಿಕ್ಕಿದ ಬೞಿಕ್ಕೆ ಪಟ್ಟವರ್ಧನಮನಿರ್ವರು ಮೇಱಿ ಬೆಳ್ಗೊಡೆ ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚ ಮಹಾಶಬ್ದಂಗಳುಂ ಬದ್ದವಣದ ಪಱೆ[೬]ಗಳುಂ[೬] ಬಾಜಿಸೆ ಅರಮನೆಯಂ ಪೊಕ್ಕು ಮಱುದಿವಸಮಾಸ್ಥಾನಮಂಟಪದೊಳ್ ಸಿಂಹಾಸನಮಸ್ತಕಸ್ಥಿತನಾಗಿ ಸಾಮಂತ ಮಹಾಸಾಮಂತರ್ಕಳಂ ಮಂತ್ರಿಮಹತ್ತರ ಪುರೋಹಿತ ಪರಿವಾರದವರ್ಗಳಮರಸಿಯರ್ಕಳಂ ಬೞಿಯಟ್ಟಿ ಬರಿಸಿ ಇಂತೆಂದು ನುಡಿದನಾನೀ ಸಂಸಾರದೊಳಪ್ಪ ಭೋಗೋಪಭೋಗಂಗಳ್ಗೆ ಪೇಸಿ ವಿರಕ್ತನಾಗಿ ತಪಂಬಡಲ್ ಬಗೆದಪ್ಪೆನೆಂದೊಡನಿಬರುಂ ನೆರೆದಿಂತೆಂದರಿನ್ನುಮಾವುದು ಕಾಲಂ ತಪಂಬಡಲ್ಕಿನ್ನುಂ ನೀಂ ಕೂಸನಯ್ ನವಯೌವನನಯ್ ಕೆಲಕಾಲಮರಸುಗೆಯ್ದು ಪಶ್ಚಾತ್ಕಾಲದೊಳ್ ತಪಂಬಡಲಕ್ಕುಮೆಂದೊಡರಸನಿಂತೆಂದನೆಂತಱಿಯಲಕ್ಕುಮನ್ನೆಗಂ ಸಾವರೊ ಬಾೞ್ವರೊ ಎಂದೀ ಪ್ರಸ್ತುತಂಗಳನವಗ್ರ್ಗಾಡಿ ಪೇೞಲ್ ತೊಡಂಗಿದಂ

**ಶ್ಲೋಕ** ॥ ಡಿಂಡೀರ ಪಿಂಡ ಸಂಕಾಶಮಾಯುಃ ಸಂಸಾರವರ್ತಿನಾಂ ।
ಆಖಂಡಲಧನುಷ್ಕಾಂಡಸನ್ನಿಭಂ ರೂಪಯೌವನಂ ॥

**ವೃ**॥ ರೂಪಂ ಯೌವನಮಾಯುರಕ್ಷವಿಷಯಾ ಭೋಗೋಪಭೋಗಾ ವಪುಃ
ವೀರ್ಯಂ ಸ್ತ್ರೀಷ್ಟ ಸಮಾಗಮೋ ವಸುಮತೀ ಸೌಭಾಗ್ಯ ಭಾಗ್ಯೋದಯೋ ।
ಯೇಽನಿತ್ಯಾಃ ಸ್ಫುಟಮಾತ್ಮನಃ ಸಮುದಿತಾ ಜ್ಞಾನೇಕ್ಷಣಾಂ (?) ಭೂಭೃತಾಂ
ಶೇಷಾ ಇತ್ಯನುಚಿಂತಯಂತು ಸುಧಿಯಃ ಸರ್ವೇ ಸದಾಽನಿತ್ಯತಾಂ ॥

ಯದಿ ಜಾತಿಜರಾಮರಣಂ ನ ಭವೇತ್ ಯದಿ ಚೇಷ್ಟವಿಯೋಗಭಯಂ ನ ಭವೇತ್ ।
ಯದಿ ಸರ್ವಮನಿತ್ಯಮಿದಂ ನ ಭವೇತ್ ಇಹ ಜನ್ಮನಿ ಕಸ್ಯ ರತಿರ್ನಭವೇತ್ ॥

ಅದಱಿಂ ಮಾನಸರ ರೂಪುಂ ಯೌವನಮುಂ ತೇಜಮುಂ ಲಾವಣ್ಯಮುಂ ಸೌಭಾಗ್ಯಮುಂ ಆಯುಷ್ಯಮುಂ ಶ್ರೀಯುಂ ಸಂಪತ್ತುಂ [೭]ವಿಭವಮುಂ[೭] ನಲ್ಮೆಯುಂ ಎಂದಿವು ಮೊದಲಾಗೊಡೆಯವನಿತ್ಯಂಗಳ್ ಮತ್ತಂ ಮೆಯ್ಯೊಳ್ಳಿತ್ತೆಯೆಂದೊಡದುವುಂ ತಾನಿಂತುಟೆ

**ಗಾಹೆ** ॥ ಏದಂ ಸರೀರಮಸುಚಿಂ ಣಿಚ್ಚಂ ಕಲಿ ಕಲುಸ ಭಾಜಣಮಚೋಕ್ಖಂ ।
ಅಂತೋ[೮]ಬಾಹಿರದಿಟ್ಠಂ[೮](?) ಸಕಿಬ್ಬಿಸ ಭರಿದಂ ತು ಅಮೇಜ್ಝಪುರಂ ॥

---

೧. ಲ್ದಿ (ಖ). ೨. ಸನೊಪ್ಪಿಸುವುದು ಮಾತನುಂ ತಾನುಂ (ಘ,ಚ,ಛ). ೩. + ನಗರ (ಘ,ಚ,ಛ). ೪. (ಕ,ಖ,ಗ)ಗಳಲ್ಲಿಲ್ಲ. ೫. + ಪೊಱ (ಕ,ಖ,ಗ). ೬. ಳ್ಕಂ (ಘ,ಚ,ಛ). ೭. ಬಲ್ಮೆಯುಂ (ಘ,ಛ), (ಚ)ದಲ್ಲಿ ತ್ರುಟಿತ. ೮. ಛಾಯಗ ದಿಟ್ಠಂ (ಕ,ಖ,ಗ), ಅಚ್ಛಾದಿ ಸದ್ದಿ (ಘ,ಚ,ಛ).

ರಸ ಮಜ್ಜ ಮಾಂಸ ಸೋಣಿದ ಪುಪ್ಫಸ ಕಾಲಿಜ್ಜ ಸೇಮ್ಮ ಸೀಹಾಣಂ ।
ಬಿಡಜಾಲ ಅಟ್ಠಿ ಸಕಲ (?) ಚಮ್ಮಾಣ ದ್ಧಂ (?) ಸರೀರಪುರಂ ॥

ಅಟ್ಠಿ ಹಿ ಛಣ್ಣಂ ಣಾಳಿಹಿ ಬದ್ಧಂ ಕಲಿಮಲಭರಿದಂ ಕಿಮಿಕ್ಕುಲ್ಲಪುಣ್ಣಂ ।
ಮಾಂಸವಿಲಿತ್ತಂ ತಯಪಡಿಛಣ್ಣಂ ಸರೀರಪುರಂತಂ ಸಂತತಮುಚೊಕ್ಖಂ ॥

ಏದಾರಿಸೇ ಸರೀರೇ ದುಗ್ಗಂಧೇ ಕುಣಿಮುಘಾತಿಏ ಯುಚೊಕ್ಖೇ ।
ಸಡಣಪಡಣಯು ಸಾರೇ ರಾಗಂ ಣ ಕರೇಂತಿ ಸಪ್ಪುರಿಸಾ ॥

ಛಾಯೇವ ಸಕದಕಮ್ಮಂ ಅಣುಯಾದಿ ಕಾರಗಂ ಣ ಸೇಸಂ । (?)
ಪಲಾಯಿದುಂ ದುಸ್ಸಕ್ಕಂ ಅಣ್ಣತ್ಥ ಜಿಣಸಾಸಣೇ ॥ (?)

*ಶ್ಲೋಕ ॥ ದುರ್ಗಂಧೇ ದುರ್ಧರೇ ದುಃಖೇ ದುಃಸ್ವಭಾವೇ ಚ ನಶ್ವರೇ ।
ದುರ್ವಿಲೋಕೇ ವೃಥಾ ಕಾಯೇ ಕಿಂ ತು ಜ್ಞಾನಿ ತವಾಗ್ರಹಃ ॥

ಅಚ್ಛೇದ್ಯೋಽನಂತ ಸೌಖ್ಯೋಽಹಂ ವೇತ್ತಾಽಪೂರ್ವೋ ನಿರಂಜನಃ ।
ಸರ್ವದುಃಖಾಕರಂ ದೇಹಂ ತ್ಯಜಾಮ್ಯೇತತ್ ಪರಿಸ್ಫುಟಂ ॥ *

ವೃ ॥ ಜಾತಿಕ್ಷ್ಮಾಜತತೇ (?) ಕೃತಾಂತ ಕುಪಿತಕ್ರೂರೋರು ದುಃಶ್ವಾಪದೇ ।
ವ್ಯಾಧಿ ವ್ಯಾಧಭಯೇ ದುರಂತದುರಿತ ಸ್ಫೂರ್ಜದ್ದವಾಗ್ನಿಚ್ಛದೇ ॥
ನಿಸ್ತ್ರಾಣಸ್ಯ ವಿಚೇತಸೋ ದೃಢತೃಷಾ ದುಃಖಾಕುಳಸ್ಯಾಂಗಿನೋ ।
ಜೈನಂ ಶಾಸನಮೇಕಮೇವ ಶರಣಂ ಜನ್ಮಾಟವೀಸಂಕಟೇ ॥

ಅದಱಿಂ

ವೃ ॥ ಯಾವತ್ ಸ್ವಸ್ಥಮಿದಂ ಶರೀರಮರುಜಂ ಯಾವಜ್ಜರಾ ದೂರತಃ ।
ಯಾವಚ್ಚೇಂದ್ರಿಯಶಕ್ತಿರಪ್ರತಿಹತಾ ಯಾವತ್ ಕ್ಷಯೋ ನಾಯುಷಃ ॥
ಆತ್ಮಶ್ರೇಯಸಿ ತಾವದೇವ ವಿದುಷಾ ಕಾರ್ಯಃ ಪ್ರಯತ್ನೋ ಮಹಾನ್ ।
ಪ್ರೋದ್ದೀಪ್ತೇ ಭವನೇ ತು ಕೂಪಖನನಂ ಪ್ರತ್ಯುದ್ಯಮಃ ಕೀದೃಶಃ ॥

ಎಂದಿವು ಮೊದಲಾಗೊಡೆಯವನೋದಿಯವಱರ್ಥಮಂ ನೆರವಿಗೆಲ್ಲಂ ವಖ್ಖಾಣಿಸಿ ಪೇೞ್ದು ಮತ್ತ[೧]ಮಿಂ[೧]ತೆಂದಂ

ಕಂ॥ ಆನಾ[೨]ಳ್ದ[೨]ನಾಳ್ಗಳವರೆನ
ಗೇನಾಯ್ತೆಂದಱಿದು[೩]ಮುಱಿಯದುಱಿದಾಂ[೩] ನುಡಿವೊಂ
ದೇನಾನುಮೇವಮುಳ್ಳೊಡ
ಮಾ ನುಡಿಯಂ ಮುಱಿಯಿಮೆಲ್ಲ[೪]ಮಿಂ[೪] ನಿಶ್ಶಲ್ಯಂ

ಗಾಹೆ ॥ ಖಮ್ಮಾಮಿ ಸವ್ವಜೀವಾಣಂ ಸವ್ವೇ ಜೀವಾ ಖಮಂತು ಮೇ ।
ಮೆತ್ತೀ ಮೇ ಸವ್ವಭೂದೇಸು ವೇರಂ ಮಜ್ಝ ಣ ಕೇಣಚಿ ॥

ಎಂದೆಲ್ಲರುಮಂ ಕ್ಷಮೆಗೊಳಿಸಿ ನಿಶ್ಶಲ್ಯಂಗೆಯ್ದು ವಿದ್ಯುದಂಗನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ರಾಜ್ಯಾಭಿಷೇಕಂ ಗೆಯ್ದಾತನಂ ಪಿಡಿದು ನೀಮೆಲ್ಲಂ ಸುಖಂಬಾೞಿಮೆಂದು ಕಲ್ಪಿಸಿ ಯಮದಂಡಂಗಂ ಪೊೞಲ ತಳಾಱಿಕೆಯಂ ಕೊಟ್ಟು ಮಂಗಳವಸದನಂಗೊಂಡು ಪಟ್ಟವರ್ಧನಮನೇಱಿ [೫]ಸತಿಯರ್ ಸಂಗಡಂ ಬರೆ[೫] ಪೆಂಡವಾಸದ ಸೂಳೆಯರಿರ್ಬರ್ [೬]ಪೆ[೬]ಱಗೇಱಿಕ್ಕೆಲದೊಳಂ ಚಾಮರಂಗಳ

೧. ಮರಸನಿಂ (ಘ,ಚ,ಛ). ೨. ಳ್ತೆ (ಕ,ಖ,ಗ). ೩. ಮುಱಿದೆ (ಕ,ಖ,ಗ). ೪. ಮಿದು (ಕ,ಖ,ಗ). ೫. ಸುತ್ತೆಪಿಂಗಡೆ (ಕ), ಸುತ್ತೆಸಂಗಡ (ಖ,ಗ). ೬. ಪೊ (ಕ,ಗ). * ಇವು (ಘ,ಚ,ಛ) ಗಳಲ್ಲಿಲ್ಲ.

ನಿಕ್ಕುರ್ತ್ತುಂ ಬರೆ ಬೆಳ್ಗೊಡೆಗಳುಂ ಪಾಳಿ[೧]ಧ್ವಜಂಗಳುಂ [೨]ತಜ್ಜನವಟಿಯಿಗೆಗಳುಂ[೨] ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಂ[೩]ಗಳೆಂ[೩]ದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ ಪಂಚಮಹಾಶಬ್ದಂಗಳುಂ ಬದ್ಧವಣದ ಪಱೆ[೪]ಗಳುಂ ಬಾಜಿಸೆ ವಂದಿ ಮಾಗಧ ಯಾಚಕ ಪ್ರಭೃತಿ[೪]ಗಳ್ಗಂ ದೀನಾನಾಥಾಂಧರ್ಕಳ್ಗಂ ತುಷ್ಟಿದಾನಮಂ [೫]ಕೊ[೫]ಡುತ್ತಂ ಪೋಗಿ ಸಹಸ್ರಕೂಟ ಚೈತ್ಯಾಲಯಮನೆಯ್ದಿ ಪಟ್ಟವರ್ಧನದಿಂದಿೞಿದು ಬಸದಿಯಂ ತ್ರಿಃಪ್ರದಕ್ಷಿಣಂಗೆಯ್ದು ದೇವರಂ [೬]ನಿವೇ[೬]ದಿಸಿ ಗುಣಧರರೆಂಬಾಚಾರ್ಯರಂ ಗುರುಭಕ್ತಿಗೆಯ್ದು ವಂದಿಸಿ ಇಂತೆಂದಂ ಭಟಾರಾ ಸಂಸಾರಮೆಂಬ ಸಮುದ್ರದೊಳ್ ಮುೞುಗುತ್ತಿರ್ದೆನ್ನಂ ಮುೞುಗಲೀಯದೆತ್ತಿಮೆನಗೆ ದೀಕ್ಷೆಯಂ ಪ್ರಸಾದಂಗೆಯ್ಯಿಮೆಂದು ನುಡಿದೊಡಂಬಡಿಸಿ [೭]ಸಾ[೭]ಸಿರ್ವರರಸುಮಕ್ಕಳ್ವೆರಸು ಕಟಕ ಕಟಿಸೂತ್ರ ಕುಂಡಲಾಭರಣಾದಿಗಳಂ ಕಳೆದು ಬಾಹ್ಯಾಭ್ಯಂತರ ಪರಿಗ್ರಹಮೆಲ್ಲಮಂ ತೊಱೆ[೩]ದು ಗುಣಧರ ಭಟ್ಟಾರರ ಪಕ್ಕದೆ ತಪಂಬಟ್ಟಂ ಮತ್ತಂ ದೇವಗಣಿಕೆಯರನೆ ಪೋಲ್ವ [೮]ಸೌಂದರಿ[೮] ಮಹಾದೇವಿ ಮೊದಲಾ[೯]ಗೇೞ್ನೂ[೯]ರ್ವರರರಸಿಯರ್ಕಳ್ ಗುಣಧರ ಭಟಾರರೆ ಗುರುಗಳಾಗೆ ತಮ್ಮತ್ತೆವಿರಪ್ಪ ವಿಜಯಮತಿ ಕಂತಿಯರ್ ಕಂತಿಯರಾಗೆ ತಪಂಬಟ್ಟು ಗಿಡಿಗಿಡಿಜಂತ್ರ ಮಿ[೧೦]ಳಿಮಿಳಿ[೧೦]ನೇತ್ರಮಾಗಿ ಘೋರವೀರ ತಪಶ್ಚರಣದೊಳ್ ನೆಗೞುತ್ತಿರ್ದರ್

ಇತ್ತ ವಿದ್ಯುಚ್ಚೋರ ಮುನಿಯುಂ ಪನ್ನೆರಡು ವರ್ಷಂಬರೆಗಂ ಗುರುಗಳನಗಲದೆ ದ್ವಾದಶಾಂಗ ಚತುರ್ದಶ ಪೂರ್ವಮಪ್ಪಾಗಮಮೆಲ್ಲಮಂ ಕಲ್ತುಗ್ರೋಗ್ರ ತಪಶ್ಚರಣದೊಳ್ ನೆಗೞುತ್ತುಮಾಚಾರ್ಯರಾಗಿ ಅಯ್ನೂರ್ವರ್ [೧೧]ಶಿಷ್ಯರ್ಕಳ್[೧೧] ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಪೋಗಿ ಪೂರ್ವದೇಶದೊಳ್ [೧೨]ಖಾಳಿಮಂಡಳ[೧೨]ಮೆಂಬ ನಾಡೊಳ್ ತಾ[೧೩]ಮ್ರಲಿಪ್ತಿಯೆಂ[೧೩]ಬ ಪೊೞಲ ಪೊಱವೊೞಲನೆಯ್ದಿದಾಗಳಲ್ಲಿ [೧೪]ವರಾಂಗಾ[೧೪]ಯಿಯೆಂ[೧೫]ಬೊಳುಗ್ರ[೧೫]ದೇವತೆಗೞುದಿಂಗ[೧೬]ಳೞುದಿಂಗಳಿಂಗೆಲ್ಲಾ ಕಾಲಮುಂ[೧೬] ಜಾತ್ರೆಯಪ್ಪುದಾ ಜಾತ್ರೆ[೧೭]ಗೆ ನಾಡೆಯು[೧೭]ಷ್ಟಮಿಯುಂದು ಬಂದು ನೆರೆದು ಜಾತ್ರೆಯಂ ಮಾಡೆ ದುರ್ಗಾದೇವತೆ ರಿಸಿಯರ ಬರವಂ ಗೆಂಟಱಿ[೧೮]ಳಿರ್ದು ಕಂಡಿದಿರಂ ಪೋಗಿ[೧೮] ಇಂತೆಂದಳೆನ್ನ ಜಾತ್ರೆ ಸಮೆವನ್ನೆಗಂ ನೀಮಿ ಪೊೞಲಂ ಪುಗದಿರಿಮೆಂದು ಬಾರಿಸಿದೊಡೆ ಶಿಷ್ಯರ್ಕಳೆಂದರ್ ನಮ್ಮಂ ದೇವತೆಯೇಗೆಯ್ದಪ್ಪಳ್ ಪೋಪಂ ಭಟಾರಾ ಎಂದು ಭಟಾರರನೊಡಗೊಂಡು ದೇವತೆ ಬಾರಿಸೆವಾರಿಸೆ ಪೊೞಲಂ ಪೊಕ್ಕು ಮತ್ತಿರುಳ್ ಪೊೞಲ ಪಡುವಣ ದೆಸೆಯ ಕೋಂಟೆಯಿಂ ಪೊಱಗಣ ದೆಸೆಯೊಳ್ ವಿದ್ಯುಚ್ಚೋರ ಭಟಾರರ್ ಪ್ರತಿಮಾಯೋಗಂ ನಿಂದೊಡೆ ದೇವತೆ ಮುಳಿದು

---

೧. +ಕೇತನ (ಘ,ಚ,ಛ). ೨. (ಘ,ಚ,ಛ)ಗಳಲ್ಲಿಲ್ಲ. ೩. ಧ್ವಜಂಗಳೆಂ (ಘ,ಚ,ಛ). ೪. +ಜನಂ (ಘ,ಚ,ಛ). ೫. ಕು (ಚ). ೬. ವಂ (ಖ,ಘ,ಚ,ಛ). ೭. ಇರ್ಛಾ (ಚ). ೮. ವಸುಂಧರೆ (ಘ,ಚ,ಛ). ೯. ಗಯ್ನೂ (ಘ,ಚ,ಛ). ೧೦. ಳಮಿಳ (ಘ,ಚ,ಛ). ೧೧. ರುಷಿಯರ್ (ಘ,ಚ,ಛ). ೧೨. ಮಂದರ (ಕ) ಮಂಡಳ (ಖ,ಗ). ೧೩. ಮಲಿಪ್ತಮೆಂ (ಘ,ಚ,ಛ). ೧೪. ಯವಂಗಾ (ಘ,ಚ), ಯವರುಗಾಯಿ (ಛ). ೧೫. ಬದುರ್ಗಿ (ಘ,ಚ,ಛ). ೧೬. ಳ್ವರಂ (ಘ,ಚ), ಳ್ವರೆಗಂ (ಛ). ೧೭. ಗಾ ನಾಡೆಲ್ಲಮು(ಘ,ಚ,ಛ). ೧೮. ಳ್ ಕಂಡಿದಿರ್ವೋಗಿ (ಘ,ಚ,ಛ).

[೧]ಪ್ರೊ*ಱ*ಸುಗಳನಿವಿರಿಯುವು[೧] ದಂಸಮಸಕಂಗಳಂ ವಿಗುರ್ವಿಸೆ ಮೆಯ್ಯೆಲ್ಲಮನಿರುಳ್ ನಾಲ್ಕು ಜಾವಮುಂ ತಿನೆ ನರಕವೇದನೆಯಿಂದಮಗ್ಗಳಮೆ ವೇದನೆಯಪ್ಪಂತುಪಸರ್ಗಂಗೆಯ್ಯೆ ಅಂತಪ್ಪ ದುಃಖಮುಂ ವೇದನೆಯುಮಂ ಮನದೊಳಿಲ್ಲದಂತಿರೆ ಸೈರಿಸಿ[೨] ಆಜ್ಞಾವಿಚಯಮಪಾಯವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾಲ್ಕುಂ ಧರ್ಮಧ್ಯಾನಂಗಳಂ ಧ್ಯಾನಿಸಿ ಬಱಿಕ್ಕೆ ಪೃಥಕ್ತ್ವ ವಿತರ್ಕವೀಚಾರಮೆಂಬ ಪ್ರಥಮ ಶುಕ್ಲಧ್ಯಾನಮಂ ಧ್ಯಾನಿಸುತ್ತಂ ಕ್ಷಪಕಶ್ರೇಣಿಯನೇಱಿ ಏಕತ್ವವಿತರ್ಕವೀಚಾರಂ ಸೂಕ್ಷ್ಮಕ್ರಿಯಾಪ್ರತೀಪಾತಿ ಸಮುಚ್ಛಿನ್ನಕ್ರಿಯಾನಿವೃತ್ತಿಯೆಂಬ ಶುಕ್ಲಧ್ಯಾನಂಗಳಂ ಧ್ಯಾನಿಸಿ ಘಾತಿಕರ್ಮಂಗಳಂ ಕಿಡಿಸಿ ಅಂತರ್ಗತಕೇವಳಿಯಾಗಿ ಅಘಾತಿಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದರ್[೩]

ಮತ್ತೆ ಸಂನ್ಯಸನಂ ಗೆಯ್ಯುತ್ತಿರ್ದ ಭವ್ಯರ್ಕಳ್ [೪]ಪರಮ ಶುದ್ಧಸಹಜ[೪]ರತ್ನತ್ರಯಮನಾರಾಧಿಸುತ್ತಿ[೫]ದೊರ್[ರ್][೫] ವಿದ್ಯುಚ್ಚೋರ [೬]ಋಷಿ[೬]ಯರಂ ಮನದೊಳ್ ಬಗೆದು ದಂಡಣೆಗಳುಮಂ ವೇದನೆಗಳುಮಂ ವ್ಯಾಧಿಗಳುಮಂ ಚತುರ್ವಿಧಮಪ್ಪುಪಸರ್ಗಮುಮಂ ಪಸಿವುಂ ನೀರಟ್ಕೆಯುಂ ಶೀತೋಷ್ಣವಾತದಂಸಮಸಕಂ ಮೊದಲಾಗೊಡೆಯವಱಿಂದಪ್ಪ ವೇದನೆಗಳುಂ ದುಃಖಂಗಳುಮಂ ಸೈರಿಸಿ [೭]ಪರಮ ಶುದ್ಧ ಸಹಜರತ್ನತ್ರಯಂಗಳಂ[೭] ಸಾಧಿಸಿ ಸ್ವರ್ಗಾಪವರ್ಗ ಸುಖಂಗಳನೆಯ್ದುಗೆ

---

೧. ರಿಷಿಯರ್ಗೆ (ಘ,ಚ,ಛ) *ರ(ಕ,ಖ,ಗ). ೨. + ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ (ಘ,ಚ,ಛ). ೩. + ಉಳಿದಯ್ನೂರ್ವರ್ ರುಸಿಯರ್ಕಳುಮುಪಸರ್ಗಂಗಳಂ ಸೈರಿಸಿ ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿ ಸ್ವರ್ಗಂಗಳನೆಯ್ದಿದರ್ (ಘ,ಚ,ಛ). ೪. (ಘ,ಚ,ಛ) ಗಳಲ್ಲಿಲ್ಲ. ೫. ದೊರ್ (ಕ,ಖ,ಗ), ದರ್ವರ್ಗಳ್ (ಘ,ಚ,ಛ). ೬. ಮುನಿ (ಘ,ಚ,ಛ). ೭. ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ (ಘ,ಚ,ಛ).

# (೧೪) ಗುರುದತ್ತ ಭಟಾರರ ಕಥೆ

ಗುರುದತ್ತ ಭಟಾರರ ಕಥೆಯಂ ಪೇೞ್ವೆಂ :

**ಗಾಹೆ** ॥ ಹತ್ಥಿಣಪುರ ಗುರುದತ್ತೋ *[ಸಮ್ಮಲಿ]*[೧]ಥಾಳೀವ[೧]ದೋಣ್ಣಿ ಮಂತಮ್ಮಿ
ದಜ್ಝಂತೋ ಅಧಿಯಾಸಿಯ ಪಡಿವಣ್ಣೋ ಉತ್ತಮಂ ಅಟ್ಠಂ ॥

[ಹತ್ಥಿಣಪುರ– ಹಸ್ತಿನಾಪುರಮುಮಂ ಮುನ್ನಾ[೨]ಳ್ವ[೨], ಗುರುದತ್ತೋ–ಗುರುದತ್ತ ರಿಸಿ, ಸ*[ಮ್ಮಲಿ]* ಥಾಳೀವ– [೩]ಸೂಡಿವೊತ್ತಿಸೆಪಟ್ಟನಂತೆ[೩], ದೋಣ್ಣಿಮಂತಮ್ಮಿ – ದೋಣಿಮಂತಮೆಂಬ ಪರ್ವತದ ಸಾರೆ, ದಜ್ಝಂತೋ – ಬೇಯುತ್ತಿರ್ದೊನಾಗಿ, ಅಧಿಯಾಸಿಯ – [೪]ಉ[೪]ಪಸರ್ಗಮಂ ಸೈರಿಸಿ, ಪಡಿವಣ್ಣೋ – ಪೊ[೫]ರ್ದಿ[೫]ದೊಂ, ಉತ್ತಮಂ ಅಟ್ಠಂ – ಮಿಕ್ಕ ದರ್ಶನ ಜ್ಞಾನ ಚಾರಿತ್ರಂಗಳಾರಾಧನೆಯಂ]

ಅದೆಂತೆಂದೊಡೆ :

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ [೬]ಕುಣಾಳ[೬]ಮೆಂಬುದು ನಾಡಲ್ಲಿ ಸಾವಸ್ತಿಯೆಂಬುದು ಪೊೞಲದನಾಳ್ವೊನುಪರಿಚರ[೭]ನೆಂಬೊನರಸನಾತನ ಮಹಾದೇವಿಯರ್ ಪದ್ಮಾವತಿ ಅಮಿತಪ್ರಭೆ ಸುಪ್ರಭೆ ಪ್ರಭಾವತಿ ಅಂತು ನಾಲ್ವರುಂ ಮಹಾದೇವಿಯರ್ ಮೊದಲಾಗಿ ಆರಸಿಯರ್ಕಳಯ್ನೂರ್ವರ್ ಪದ್ಮಾವತಿ ಮಹಾದೇವಿಯ ಮಗನನಂತವೀರ್ಯನಮಿತಪ್ರಭೆಯ ಮಗಂ ವಜ್ರಪಾಣಿ ಸುಪ್ರಭೆಯ ಮಗಂ ವಜ್ರಬಾಹು ಪ್ರಭಾವತಿಯ ಮಗಂ ವಜ್ರ[೮]ಧ[೮]ರನಿಂತೀ ನಾಲ್ವರುಂ ಮಹಾದೇವಿಯರ ಮಕ್ಕಳ್ ಉೞಿದರಸಿಯರ ಮಕ್ಕಳಯ್ನೂರ್ವರಂತವರ್ಗ[೯]ಳಿ[೯]ಷ್ಟವಿಷಯ ಕಾಮಭೋಗಂಗಳನನುಭವಿಸುತ್ತಂ ಪಲಕಾಲಂ ಸಲೆ ಮತ್ತೊಂದು ದಿವಸಂ ವಸಂತಕಾಲದೊಳ್ ಅಂಕುರಿತ ಪಲ್ಲವಿತ ಕೋರಕಿತ ಕುಸುಮಿತ ಫಲಿತಮಪ್ಪ ಮನೋಹರೋದ್ಯಾನಕ್ಕಯ್ನೂರ್ವರರಸಿಯರ್ಕಳು[೧೦] ಮಣುಗರ್ಕಳುಂ[೧೦] ಬೆರಸು ಪೋಗಿ ಮಹಾವಿಭೂತಿಯಿಂ ವನಕ್ರೀಡೆಯಂ ಪಿರಿದುಂ ಬೇಗಮಾಡಿ ಬೞಿಕ್ಕಾನಂದನವನದೊಳಗಣ ಸುದರ್ಶನಮೆಂಬ ಮಣಿಕುಟ್ಟಿಮಮಪ್ಪ[೧೧]ಬೊಡ್ಡಣ[೧೧]ಬಾವಿಯೊಳ್ ಕರ್ಪೂರ ಕಾಳಾಗರು ತುರುಷ್ಕ ಕುಂಕುಮ ಚಂದನಾದಿ ಸುಗಂಧ ದ್ರವ್ಯಂಗಳಿಂ ಬೆರಸೆಪಟ್ಟುದಱೊಳ್ ಮತ್ತಂ[೧೨]ನೀಲೋತ್ಪಲ ಕುವಳಯಂ ಮೊದಲಾಗೊಡೆಯ ನಾನಾ ಪ್ರಕಾರದ ಪುಷ್ಪಜಾತಿಗಳಿಂದಂ ಸಂಛನ್ನಮಪ್ಪುದ[೧೩]ಱೊಳ್

*ಪ್ಪಳಿ (ಸ) ೧. ತಾಳಿರ (ಕ,ಖ,ಗ,), ದಾಳಿವ (ಘ,ಚ) ದಾಳಿದ (ಛ). ೨. ಳ್ದ (ಗ), ಳ್ದನಾಗಿ (ಘ,ಚ,ಛ). ೩. ಕವೆಲೆವೊಲು (ಕ,ಗ), ಕವಿಲೆವೊಲ್ (ಖ). ೪. ಆಮನುಷ್ಯೋ (ಘ,ಚ,ಛ). ೫. ಳ್ದಿ (ಕ,ಖ,ಗ). ೬. ಕುಣಾಣ (ಕ,ಗ), ಕಣಾಳ (ಖ), ಕುಳಾಳ (ಘ,ಚ,ಛ). ೭. + ಮಹಾರಾಜ (ಘ,ಚ,ಛ). ೮. ವ (ಘ,ಚ,ಛ). ೯. ಳಿಲ್ಲಮಿ (ಘ,ಚ). ೧೦. ಮನಿಬರ್ ಮಕ್ಕಳುಂ (ಕ,ಖ,ಗ). ೧೧. ಒಡ್ಡ (ಕ,ಗ), ವೊಡ್ಡ (ಖ), ಬೊಂಡಣ (ಘ,ಛ). ೧೨. + ಪದ್ಮ (ಛ). ೧೩. + ದ.

ಚಕ್ರವಾಕ ಬಕ ಬಳಾಕ ಹಂಸ ಮಂಡೂಕ ಜೀವಂ ಜೀವಕ ಚಕೋರಾದಿ ಜಲಚರ ವಿಹಂಗ ಸಮೂಹಂಗಳನೊಡೆಯದ[೧]ಱೊಳ್ ನಾಲ್ವರುಂ ಮಹಾದೇವಿಯರ್ವೆರ[೨]ಸೊಂದೊ[೨]ರ್ವರಂ ನಾನಾ ಪ್ರಕಾರದ ಯಂತ್ರಂಗಳಿಂದಂ ಜೀರ್ಕೊೞವಿಗಳಿಂದಂ ತಳಿಯುತ್ತಂ ನೀರ್ಗಳಂ ಸೂಸುತ್ತಂ ಜಲಕ್ರೀಡೆಯಂ ಮನಕ್ಕೆ[೩]ವಂದ[೩]ರಸಿಯರ್ಕಳೊಡನೆ ನೀಡುಂ ಬೇಗಮಾಡುತ್ತಿರ್ಪನ್ನೆಗಂ

ಮತ್ತಿತ್ತ ವಿಜಯಾರ್ಧ ಪರ್ವತದ ಉತ್ತರ ಶ್ರೇ[೪]ಣಿ[೪]ಯೊಳಳಕಾಪುರಮೆಂಬುದು ಪೊೞಲದನಾಳ್ವೊಂ ವಜ್ರದಾಡನೆಂಬ ವಿದ್ಯಾಧರನನೇಕ ವಿದ್ಯಾ[೫]ಬಲ[೫]ಗರ್ವಿತನಾತನ ಮಹಾದೇವಿ ಮದನವೇಗೆಯೆಂಬೊಳಂತವರಿರ್ವರುಮೊಂದು ದಿವಸಂ ರಮ್ಯ ಪ್ರದೇಶಂಗಳೊಳ್ ಕ್ರೀಡಿಸಲ್ವೇಡಿ ಭೌಮವಿಹಾರಕ್ಕೆಂದು ವಿಚಿತ್ರಮಾಗುತ್ತಿರ್ದ ವಿಮಾನಮನೇಱಿಯಾಕಾಶಪಥದೊಳ್ ಪೋಗುತ್ತಿ[೬]ರ್ದವರ್ಗಳ್[೬] ದೇವಸಮಾನರಪ್ಪ ಸಾಮಂತ ಮಹಾ ಸಾಮಂತರ್ಕಳಿಂದಂ ದೇವಗಣಿಕೆಯ[೭]ರಪ್ಸರೆಯರ್ಕಳಂ[೭] ಪೋಲ್ವಯ್ನೂರ್ವರರಸಿಯರ್ಕಳಿಂದಂ ಪೆಂಡವಾಸ[೮]ದೆಳವೆಂಡಿರಿಂ[೮]ದಂ ಪರಿವಾರ ಜನಂಗಳಿಂದಮಿಂತು ದಿವ್ಯಮಪ್ಪ [೯]ಸ[೯]ಭೆಯಿಂದಂ ಪರಿವೇಷ್ಟಿತನಾಗಿ ಪಟು ಪಟಹ ಪಣವ ತುಣವ ಭಂಭಾ ಮರ್ದಳ ಝುಲ್ಲರಿ ಮುಕುಂದ ಶಂಖ ವಂಶ ತಾಳ ಭೇರೀ ಮೃದಂಗ ವೀಣಾ[೧೦] ಕಹಳಾದಿ ನಾನಾ ಪ್ರಕಾರದ ತೂರ್ಯ[೧೧]ಧ್ವನಿ[೧೧]ಗಳ್ ದೇವ ದುಂದುಭಿ ಮೊೞಗುವಂತೆ ಭೋರ್ಗರೆದು ಮೊೞಗೆ ಮಹಾ ವಿಭೂತಿಯಿಂದಂ ಜಲಕ್ರೀಡೆಯನಾಡುತ್ತಿರ್ಪಪರಿಚರ ಮಹಾ[೧೨]ನೃಪತಿಯ[೧೨]ನಿರ್ವರುಂ ಕಂಡು ವಿಮಾನಮಂ ನಿ[೧೩]ಱಿ[೧೩]ಸಿ ನೀಡುಂ [೧೪]ಬೇಗಂ[೧೪] ನೋಡಿ ಮದನವೇಗೆಯಿಂತೆಂದಳ್ ನಾ[೧೫]ಮಾ[೧೫]ಕಾಶದೊಳ್ ಕಾಗೆಗಳಂತಿರೆ ಪಾಱುವನಿತಲ್ಲದೆ ನಮ[೧೬]ಗಿನಿತು[೧೬] ವಿಭವಮು[೧೭]ಮೈಶ್ವರ್ಯ[೧೭]ಮುಂಟೆ ಶ್ರೀಯೊಳಂ ರೂಪಿನೊಳಂ[೧೮] ವಿಭವದೊಳಂ[೧೯] ನಾನಾ ಪ್ರಕಾರದ ವಿನೋದಂಗಳಿಂದಮುಪರಿಚರ ಮಹಾರಾಜನಿಂದಗ್ಗಳಂ ಪೇಱರಾರುಮಿಲ್ಲವಿೀ ಸಂಸಾರದೊ[೨೦]ಳ್ ಬರ್ದ ಬಾೞನೀ[೨೦]ತನೆ ಬರ್ದನೆಂದು ಪೊಗೞ್ದೊಡೆ ವಜ್ರದಾಡಂ ಕೇಳ್ದು [೨೧]ಮನದೊಳ್[೨೧] ಮು[೨೨]ಳಿ[೨೨]ದು ಪುರುಡಿಸಿ ತನ್ನ ಪೊೞಲ್ಗೆ ವೋಗಿ ಮದನವೇಗೆಯನಲ್ಲಿಟ್ಟು ತಾನೊರ್ವನೆ ವಿಮಾನಮನೇಱಿ ತುರಿಪದಿಂ ಬಂದು ಜಳಕ್ರೀಡೆಯನಾಡುತ್ತಿರ್ಪ್ಪುಪರಿಚರ ಮಹಾನೃಪತಿಯ ಮೇಗೆ ವಿದ್ಯೆಯಿಂದಂ ವಿಗುರ್ವಿಸಿ ಪಿರಿದೊಂದು ಶಿಲೆಯನೆತ್ತಿಕೊಂಡು [೨೩]ಬಂದು ಮಣಿಕುಟ್ಟಿಮಮಪ್ಪ ಸುದರ್ಶನಮೆಂಬ ಬಾವಿಯ ಬಾಗಿಲೆಲ್ಲಮಂ ನಿಶ್ಛಿದ್ರಮಾಗಿ ಮುಚ್ಚಿ ಕವಿದಿಕ್ಕಿ ಪೋದಂ[೨೩] ಪೋದೊಡೆ ಪದ್ಮಾವತಿ ಮೊದಲಾಗೊಡೆಯ ನಾಲ್ವರ್

---

೧. + ದ (ಕ,ಖ,ಗ). ೨. ಸು ಓರೊ (ಕ,ಖ,ಗ). ೩. ಮೆಚ್ಚುವ (ಘ,ಚ,ಛ). ೪. ಢಿ (ಘ,ಚ,ಛ). ೫. (ಛ)ದಲ್ಲಿಲ್ಲ. ೬. ರ್ದಾಗಳ್ (ಘ,ಚ,ಛ) ೭. ರುಮಪ್ಸರೆಯರ್ಕಳಂ (ಖ), ರಿಗೆ ಸಮಾನೆಯುರಪ್ಪರಸಿಯರ್ಕಳ್ಕಂ (ಛ). ೮. ದ ಪಲಬರು ಮೊಳ್ಪೆಂಡಿರ್ಕಳಿಂ (ಖ,ಘ,ಚ), ದ ಪಲಬರೊಳ್ಪೆಂಡಿರ್ಕಳಿಂ (ಛ). ೯. ಶೋ (ಘ,ಚ,ಛ). ೧೦. + ಜಯಘಂಟಾ (ಘ,ಚ,ಛ). ೧೧. ರವಂ (ಖ,ಘ,ಚ,ಛ). ೧೨. ರಾಜನ (ಘ,ಚ,ಛ). ೧೩. ಲಿ (ಘ,ಚ,ಛ). ೧೪. (ಘ,ಚ,ಛ) ಗಳಲ್ಲಿಲ್ಲ. ೧೫. ವಾ (ಕ,ಗ). ೧೬. ಗಿಂತಪ್ಪ (ಘ,ಚ,ಛ). ೧೭. (ಚ,ಛ)ಗಳಲ್ಲಿಲ್ಲ. ೧೮.+ ತೇಜದೊಳಂ (ಘ,ಚ,ಛ). ೧೯. + ಮೈಶ್ವರ್ಯದೊಳಂ (ಘ,ಚ,ಛ). ೨೦. ಳೀ (ಘ,ಚ,ಛ). ೨೧. (ಘ,ಚ,ಛ) ಗಳಲ್ಲಿಲ್ಲ. ೨೨. ನಿ (ಘ,ಚ,ಛ). ೨೩. (ಚ)ದಲ್ಲಿ ತ್ರುಟಿತ.

ಮಹಾದೇವಿಯರುಂ ಮೋಹಿಸದ ಬುದ್ಧಿಯನೊಡೆಯರಧಿಗಮ ಸಮ್ಯಗ್ ದೃಷ್ಟಿಗಳ್ ಚತುರ್ವಿಧಮಪ್ಪಾಹಾರಕ್ಕಂ ಶರೀರಕ್ಕಂ ಜಾವಜ್ಜೀವಂ ನಿವೃತ್ತಿಗೆಯ್ದು ಪಂಚ ನಮಸ್ಕಾರಮನುಚ್ಚಾರಿಸುತ್ತಂ ದೇವರಂ [೧]ಜಾ[೧]ನಿಸುತ್ತಂ[೨] ದರ್ಶನ ಜ್ಞಾನ ಚಾರಿತ್ರಂಗಳನಾರಾಧಿ[೩]ಸುತ್ತಂ[೩] [೪]ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನದೊಳೊಂದು ಸಾಗರೋಪಮಾಯುಷ್ಯಮನೊಡೆಯರ್ ಸಾಮಾನಿಕ ದೇವರಾಗಿ ನಾಲ್ವರುಂ ಪುಟ್ಟಿದರ್ ಮತ್ತುಪರಿಚರ[೫]ನಪ್ಪರಸಂ[೫] ಮಿಥ್ಯಾದೃಷ್ಟಿಯುಪ್ಪದಱಿಂ ತನ್ನುದ್ಯಾನವನದೊಳ್ ರಾಜ್ಯವಿಭೂತಿಯೊಳಾದಮಾನುಂ ಮೋಹಿ[೬]ಸಿ[೬]ದ ಬುದ್ಧಿಯನೊಡೆಯನಾರ್ತಧ್ಯಾನದಿಂ ಸತ್ತು ತನ್ನ ಮನೋಹರೋದ್ಯಾನವನದೊಳ್[೭] ಪೆರ್ವಾವಾಗಿ ಪುಟ್ಟಿದಂ

ಮತ್ತೆರಡನೆಯ ದಿವಸದಂದು ಸಾಮಂತ ಮಹಾಸಾಮಂತರ್ಕಳುಂ ಪರಿವಾರಮುಂ ನೆರೆದು ಅನಂತವೀರ್ಯನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ[೮]ದರ್ ಮೂಱ[೮]ನೆಯ ದಿವಸದಂದು ಸಾರಸ್ವತರೆಂಬಾಚಾರ್ಯರವಧಿಜ್ಞಾನಿಗಳಯ್ನೂರ್ವರ್ ಋಷಿಯರ್ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಆ ಪೊಱಲ್ಗೆ ವಂದು ಮನೋಹರಮೆಂಬ ನಂದನವನದೊಳಗಣ ಸ್ಫಟಿಕಶಿಳಾತಳದ ಮೇಗಿರ್ದೊರಂ ಋಷಿನಿವೇದಕಂ ಕಂ[೯]ಡು ಬಂದ[೯]ನಂತವೀರ್ಯ ನೃಪತಿಗೆ ಪೇೞ್ದೊಡಾತನುಂ [೧೦]ಸಪರಿವಾರಂ[೧೦] ಭಟಾರರಲ್ಲಿಗೆ ವಂದನಾಭಕ್ತಿಗೆ ವೋಗಿ ಬಲಗೊಂಡು ಗುರುಭಕ್ತಿಗೆಯ್ದು [೧೧]ವಂದಿಸಿಯುೞಿದ ರಿಸಿಯರೆಲ್ಲರು[೧೧]ಮಂ ಗುರುಪರಿವಿಡಿಯಿಂದಂ ವಂದಿಸಿ ಪಿರಿದುಬೇಗಂ ಧರ್ಮಮಂ ಕೇಳ್ದು [೧೨]ಬೞಿಕಿಂ[೧೨]ತೆಂದು ಬೆಸಗೊಂಡಂ ಭಟಾರಾ ಎಮ್ಮ ತಂದೆಗಂ ತಾ[೧೩]ಯ್ವಿರ್ಕ[೧೩]ಳ್ಗಮಾಕಸ್ಮಿಕಮೊರ್ಮೊದಲನಿಬರ್ಗಮೇ ಕಾರಣಂ ಸಾವಾದುದಾರ್ ಕೊಂದರೆಂ[೧೪]ದು ಬೆಸಗೊಂಡೊ[೧೪]ಡೆ ಭಟಾರರಿಂತೆಂದು ಪೇೞ್ದರ್ ಸುದರ್ಶನಮೆಂ[೧೫]ಬ ಬೊಡ್ಡಣ ಬಾ[೧೫]ವಿಯೊಳ್ ನಿಮ್ಮ ತಂದೆಯುಂ ನಾಲ್ವರ್ ತಾಯ್ವಿರ್ಕಳುಂ ಜಳಕ್ರೀಡೆಯನಾಡುತ್ತಿ[೧೬]ರ್ಪನ್ನೆಗಂ ಭೌಮವಿಹಾರಾರ್ಥಂ[೧೬] ವಿಮಾನಮನೇಱಿ ಪೋಗುತ್ತಿರ್ದ ವಜ್ರದಾಡನೆಂಬ ವಿದ್ಯಾಧರನುಮಾತನ ಮಹಾದೇವಿ ಮದನವೇಗೆಯೆಂಬೊಳಾಯಿರ್ವರುಂ ಕಂಡು ನಿಮ್ಮ ತಂದೆಯ ವಿಭವಮಂ ಮದನವೇಗೆ ಪೊಗೞ್ದೊಡೆ ವಜ್ರದಾಡಂ[೧೭] ಪುರು[೧೮]ಡು ಪುಟ್ಟಿ ಬಾವಿಯ ಬಾಗಿಲಂ[೧೮] ನಿಶ್ಛಿದ್ರಮಾಗಿ [೧೯]ಮುಚ್ಚಿ ಮೇಗೆ[೧೯] ಪಿರಿ[೨೦]ದೊಂದು ಶಿ[೨೦]ಲೆಯನಿಕ್ಕಿಪೋದೊಡೀ ಪಾಂಗಿ

---

೧. ಧ್ಯಾ (ಖ,ಘ,ಚ,ಛ). ೨. + ಸಮ್ಯಗ್ (ಘ,ಚ,ಛ). ೩. ಸಿ ಮುಡಿಪಿ (ಘ,ಛ). ೪. + ಸಮಾಧಿವಿಧಿಯಿಂ ಮುಡಿಪಿ (ಚ). ೫. ಮಹಾರಾಜಂ (ಘ,ಚ,ಛ). ೬. ಸ (ಕ,ಖ,ಗ). ೭. + ಸಂಮೂರ್ಚ್ಛಿಮಮಂ (ಘ), ಸಂಮೂರ್ಚಿಮಮಂ (ಚ,ಛ). ೮. ಮತ್ತೆರಡ (ಕ,ಖ,ಗ). ೯. ಡ (ಘ,ಚ,ಛ). ೧೦. ಪರಿವಾರಂ ಬೆರಸು (ಘ,ಚ,ಛ). ೧೧. ಳಿದ ರುಷಿಸಮುದಾಯುಮು (ಘ,ಚ,ಛ). ೧೨. ತದನಂತರಮಿಂ (ಘ,ಚ,ಛ). ೧೩. ಯ್ಗಂ ಮಕ್ಕ (ಘ,ಛ). ೧೪. ದೊ (ಘ), ದ (ಚ,ಛ). ೧೫. ಬೊಡ್ಡ ಬಾ (ಕ), ಬೊಡ್ಡಣ ಬಾ (ಖ), ಬ ಬೊಡ್ಡ ಬಾ (ಗ), ಬೊಡ್ಡಣ ವಾ (ಘ,ಚ), ಬೊಡ್ಡಣ ಬಾ (ಛ). ೧೬. ರ್ದಲ್ಲಿ ನಿಮ್ಮ ತಂದೆಯು ವಿಭವಮಂ (ಕ,ಖ,ಗ). ೧೭. +ಗೆ (ಕ,ಖ,ಗ). ೧೮. ಡಿಸಿ (ಘ,ಚ,ಛ) ೧೯. ಮುಚ್ಚಿರ್ದ ಮೇಗೆ (ಕ), (ಘ,ಚ,ಛ)ಗಳಲ್ಲಿಲ್ಲ. ೨೦. ದು ಸೆ (ಘ,ಚ), ಯ ಸಿ (ಛ).

ನೊ[೧]ಳ[೧]ವರ್ಗಳನಿಬರ್ಗಂ ಮೃತ್ಯುವಾದುದೆಂದು ಪೇ[೨]ಟ್ಟೊಡೆ[೨] ಮತ್ತಮವರೆಲ್ಲಿ ಪುಟ್ಟಿದರೆಂದು ಬೆಸ[೩]ಗೊಂಡೊಡೆ[೩] [೪]ಭಟಾರರಿಂತೆಂದರ್[೪] ನಿಮ್ಮ ತಾಯ್ವಿರ್ಕಳ್[೫] ಬ್ರ[೬]ತಮುಂ ಪರಿ[೬]ಪಾಲಿಸಿ ಸಾವ ಕಾಲದೊಳಾಹಾರಕ್ಕಂ ಶರೀರಕ್ಕಂ [೭]ಜಾವಜ್ಜೀವಂ[೭] ನಿವೃತ್ತಿಗೆಯ್ದು ಸಮಾಧಿಮರಣದಿಂದಂ ಮುಡಿಪಿ ಸೌಧರ್ಮಕಲ್ಪದೊಳ್ ಸ್ವಸ್ತಿಕಾವರ್ತಮೆಂಬ ವಿಮಾನದೊಳೊಂದು ಸಾಗರೋಪಮಾಯುಷ್ಯಮನೊಡೆ[೮]ಯರ್ ಕಾಂತನುಂ ಸುಕಾಂತನುಂ ನಂದನುಂ ಸುನಂದನು[೮]ಮೆಂಬ ದೇವರ್ಕಳಾಗಿ ಪುಟ್ಟಿದವರ್ಗಳ್ ನಿಮ್ಮು[೯]ಮಂ ನಿ[೯]ಮ್ಮ ತಂದೆಯುಮಂ ಪ್ರತಿಬೋಧಿಸಲ್ಕೀಗಳೆ ಬಂದಪ್ಪರೆಂದು ಪೇೞ್ದು ಮತ್ತೆ ನಿಮ್ಮ ತಂದೆ[೧೦]ಯುಂ ತ[೧೦]ನ್ನ ಪೆಂಡಿರ್ ಮಕ್ಕಳ್ ಪರಿವಾ[೧೧]ರಂ[೧೧] ಕಸವರಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿ [೧೨]ಅಲ್ಲಿಯ[೧೨] ನಂದನವನದೊಳಗಣ ಸ[೧೩]ರ್ವಾ[೧೩]ಶ್ರಯಮೆಂಬ ಗುಹೆಯೊಳ್ [೧೪]ಮಹಾಕಾಯಂ[೧೪] ಪೆರ್ವಾವಾಗಿ ಪುಟ್ಟಿದನೆಂದೊಡೆ ಧರ್ಮಮಂ [೧೫]ಕೈ[೧೫]ಕೊಳ್ಗುಮೊ [೧೫]ಕೈ[೧೫]ಕೊಳ್ಳನೊ ಎಂದು [೧೬]ಬೆಸಗೊಂಡೊಡೆ[೧೬] [೧೭]ಭಟಾರರಿಂತೆಂದರ್[೧೭] ನೀ[೧೮][ನ್][೧೮] ಪೇೞೆ ಧರ್ಮಮಂ ಕೈಕೊಳ್ಗುಮೆಂದೊಡೆ ತ[೧೯]ಮ್ಮಂದಿರುಂ[೧೯] ಪರಿವಾರ[೨೦]ಮುಂ[೨೦] ಬೆರಸು ಪೋಗಿ ಗುಹೆಯ ಬಾಗಿಲೊಳಿರ್ದಿಂತೆಂದ ನೆಲೆಯುಪರಿಚರ ಮಹಾರಾಜಾ ಪೆರ್ವಾವಾಗಿ ಪುಟ್ಟಿಯುಮಿಂತಪ್ಪವಸ್ಥೆ[೨೧]ಯೊಳಂ[೨೧] ಬಾೞ್ಕೆ[೨೨]ಯೊಳಂ ಇನ್ನುಂ ನಿನಗ[೨೨]ೞ್ತಿಯೆ ನಿನಗೆ ದೋಷಮಿ[೨೩]ಲ್ಲೀಕೆಂದೊಡೆ[೨೩] ಜೀವಂಗಳ ಸ್ವಭಾವಮಿಂತುಟು

**ಶ್ಲೋಕ ॥** ಯತ್ರ ಯತ್ರೋಪಪದ್ಯಂತೇ ಜೀವಾಃ ಕರ್ಮವಶಾನುಗಾಃ ।
ತತ್ರ ತತ್ರ ರತಿಂ ಯಾಂತಿ *ಸ್ವೇನ ಸ್ವೇನೈವ* ಕರ್ಮಣಾ ॥

ಎಂಬುದು ತಮ್ಮ ಕರ್ಮವಶದಿಂ [೨೪]ಸಂಸಾರಿ[೨೪]ಜೀವಂಗಳೆಲ್ಲಿ ಪುಟ್ಟುಗುಮಲ್ಲಿಯಲ್ಲಿಯಱ್ತಿಯುಂ [೨೫]ಮೆಚ್ಚು[೨೫]ಗೆಯುಮಕ್ಕುಂ ಮುನ್ನೆ ನೀನ್ ಕರುಮಾಡದೊಳ್ ಸಿಂಹಾಸನಮಸ್ತಕಸ್ಥಿತನಾಗಿ ಸಾಮಂತ ಮಹಾಸಾಮಂತರ್ಕಳಿಂದಮುಯ್ಯೂರ್ವರರಸಿಯರ್ಕಳಿಂದಂ ಪೆಂಡವಾಸದಗ್ಗಳದ ಸೂಳೆಯರ್ಕಳಿಂದಂ ಪರಿವಾರದಿಂದಮಿಂತಪ್ಪ [೨೬]ದಿಬ್ಯ[೨೬]ಸಭೆಯಿಂದಂ ಪರಿವೇಷ್ಟಿತನಾಗಿ ಆಟಪಾಟವಿನೋದಂಗಳಿಂದಿರ್ಪಾತ[೨೭]ನಯ್ ಈಗಳ್[೨೭] ಪೆ[೨೮]ರ್ವಾವುಗಳೊಡನೆ ನೆರೆದಿರಮಾ[೨೮]ಯ್ತು ಮತ್ತೆ

---

೧. ಳಂತ (ಗ). ೨. ಳೆ (ಘ,ಛ). ೩. ಗೊಳೆ (ಘ,ಚ,ಛ). ೪. (ಚ,ಛ)ಗಳಲಿಲ್ಲ. ೫. +ಸಮ್ಯಕ್ತ್ವಪೂರ್ವಕಂ ಶ್ರಾವಕ (ಘ,ಚ,ಛ). ೬. ತಂಗಳಂ ಪ್ರತಿ (ಖ,ಘ,ಚ,ಛ). ೭. (ಘ,ಚ,ಛ) ಗಳಲ್ಲಿಲ್ಲ. ೮. ಯರ್ ನಂದನುಂ ಸುನಂದನು (ಕ,ಖ,ಗ), ಯೊರಾಗಿ ನಂದನುಂ ಸುನಂದನುಂ ದ್ಯುತಿ ಕಾಂತನುಂ ಸುಕಾಂತನು (ಘ,ಚ,ಛ). ೯. ಮುನ್ನಿ (ಗ). ೧೦. ಯು ಮೆ (ಘ,ಚ,ಛ). ೧೧. ರಕ್ಕಂ (ಕ,ಖ,ಗ). ೧೨. ಯಾರ್ತಧ್ಯಾನದಿಂ ಸತ್ತೀ (ಘ,ಚ,ಛ). ೧೩. ವಾರ್ (ಕ,ಖ,ಗ). ೧೪. (ಘ,ಚ,ಛ) ಗಳಲ್ಲಿಲ್ಲ. ೧೫. (ಘ,ಚ,ಛ)ಗಳಲ್ಲಿಲ್ಲ. ೧೬. ಎಂದು ಬೆಸಗೊಳೆ (ಘ,ಛ), ಎಂದಡೆ (ಚ). ೧೭. (ಘ,ಚ,ಛ) ಗಳಲ್ಲಿಲ್ಲ. ೧೮. ನು (ಕ,ಗ), ನುಂ (ಖ), ನಿಂ (ಘ,ಚ,ಛ). ೧೯. ನ್ನ (ಘ,ಚ,ಛ). ೨೦. ಮನಿತುಂ (ಘ,ಚ,ಛ). ೨೧. ಯ (ಘ,ಚ,ಛ). ೨೨. ನಿನಗಿನ್ನುಮ (ಘ,ಚ,ಛ). ೨೩. ಲ್ಲ ಕೇಳಾ (ಘ,ಚ,ಛ). *ರಂಜಿತಾಸ್ತೇನ (ಘ,ಚ,ಛ). ೨೪. ಸಂಸಾರ (ಕ,ಗ), (ಘ,ಚ,ಛ)ಗಳಲ್ಲಿಲ್ಲ. ೨೫. ಪೆರ್ಚು (ಕ,ಗ). ೨೬. (ಘ,ಚ,ಛ)ಗಳಲ್ಲಿಲ್ಲ. ೨೭. ನೀಗಳೀಕೆ (ಘ,ಚ,ಛ). ೨೮. ಬ್ಬಾ ... ಮಾ (ಕ), ರ್ವಾ ... ಮಾ (ಖ), ರ್ಬಾ ... ಮಾ (ಗ), ರ್ವಾ ... ವಾ (ಘ,ಚ), ರ್ವಾವಾಗಿ ಪುಟ್ಟಿದೊಡನಿರವಾ (ಛ).

ದಿವ್ಯಮಪ್ಪ ಶಯ್ಯಾತಳ[೧]ದೊಳ್ ನಿದ್ರೆಗೆಯ್ವಾತನಯ್[೧] [೨]ಈಗಳ್ ಪೆ[೨]ಟ್ಟಿಗಳುಂ ಕಿಱುಗ[೩]ಲ್ಗಳುಮೊ[೩]ತ್ತಿ [೪]ನಿದ್ರೆಗೆಯ್ವೆಯಾದಯ್[೪] ಮತ್ತಮೃತೋಪಮಮಪ್ಪ ದಿಬ್ಯಾಹಾರಮನುಣ್ಬಾತನಯ್ ಈಗಳ್ ಕಪ್ಪೆಗ[೫]ಳುಮೆ[೫]ಸಡುಗ[೬]ಳುಮಿಲಿಗಳು ಮೊಂ[೬]ತಿಗಳುಂ ಮೊದಲಾಗೊಡೆಯ ಜೀವರಾಶಿಗಳಂ ಕೊಂದು ತಿನ್ಬೆಯಾದಯ್ ಇನ್ನವಂ ತಿಂದು ನರಕಂಬುಗಲಾಟಿಸಿದಪ್ಪಯ್ ಎಂದು ಪೇೞೆ ಜಾತಿಸ್ಮರನಾಗಿ ಗುಹೆಯ ಬಾಗಿಲೊಳ್ [೭]ಬಂದಿ[೭]ರ್ದು ಧರ್ಮಮಂ ಕೇಳುತ್ತಿರ್ಪನ್ನೆಗಮಾ ಸೌಧರ್ಮಕಲ್ಪದೊಳ್ ಪುಟ್ಟಿರ್ದ ನಾಲ್ವರುಂ ದೇ[೮]ವರ್ಕ[೮]ಳ್ ತಮ್ಮ ಮುನ್ನಿನ ಪೆ[ಣ್ಣ][೯]ರೂಪಂಗಳಂ ಕೈಕೊಂಡು ಬಂದು ಮುಂದೆ ನಿಂದಾಗಳ್[೧೦]ಕಂಡು[೧೦] ತಮ್ಮ ತಾಯ್ವಿರ್ಕಳ್ಗೆ ಕ್ಷೇಮಂಗುಡಲೆಂದು ಪೋದೊ[೧೧]ಡ[೧೧]ನ್ನೆಗಂ ಅವ[೧೨]ರ್[೧೨] ಮುಟ್ಟದೆ ಮೇಗಣ್ಗೆ ನೆಗೆದಿದಿರ್ದೊಡಿದೇನೆಂದು ಬೆಸಗೊಂ[೧೩]ಡೊಡವರ್[೧೩] ವಜ್ರ ದಾ[೧೪]ಡಂ[೧೪] ಕೊಲೆ ಸತ್ತು ತಮ್ಮ ದೇವಗತಿಯೊಳ್ ಪುಟ್ಟಿದ ತೆಱನೆಲ್ಲಮಂ ಪೇೞ್ದು ಉಪರಿಚರ ಮಹಾನೃಪತಿಯುಂ

ವೃ॥ ಏತತ್ಕ್ಷೇತ್ರಂ ಮದೀಯಂ ಗೃಹಮಿದಮಪರಂ ಮಾತೃ[೧೫]ಭಾರ್ಯಾ[೧೫] ಮಮೈತಾಃ
ಪುತ್ರೋ ಮೇಯಂ ಮೇ ಸುಕಾಂತ ಸ್ವಸೃ ದುಹಿತೃಜನೋ ಮಾನುಷೋ ಬಂಧುವರ್ಗಃ।
ಅಶ್ವಾದಾಸಾ ಮನುಷ್ಯಾ ಮಮಪರಮಹಿತಾ [೧೬]ದ್ರವ್ಯ[೧೬]ಗಾವೋ ಮಹಿಷ್ಯಃ
ಇತ್ಯೇವಂ ಮೇ ಬ್ರುವಾಣೋ ನರಪಶುರನಿಶಂ ನಾಶಯತ್ಯಾತ್ಮಕಾರ್ಯಂ ॥

ಆರ್ಯೆ॥ ಅರ್ಥೋ ಮೇ ಭಾರ್ಯಾ ಮೇ ಪುತ್ರೋ ಮೇ ಸ್ವಜನಬಂಧುವರ್ಗೋ ಮೇ ।
ಇತಿ ಮೇ ಮೇ ಕುರ್ವಾಣಂ ಪುರುಷ ಪಶುಂ ಹಂತಿ ಕಾಲವೃಕಃ ॥

ಎಂದಿವಱರ್ಥಮನಿಂತೆಂದು ಪೇೞ್ದೊಡೆ ಎನ್ನ ಮಾಡಮೆನ್ನ ಪೊೞಲೆನ್ನ[೧೭]ನಾಡೆನ್ನ ತಾಯೆನ್ನ[೧೭] ಪೆಂಡಿರೆನ್ನ[೧೮]ಮಕ್ಕಳೆನ್ನ[೧೮] ತಂಗೆವಿರೆನ್ನ ಮಾವ[೧೯]ಂದಿರೆ[೧೯]ನ್ನ ಬಂಧು ವರ್ಗಮೆನ್ನಾನೆಗಳೆನ್ನ ಕುದುರೆಗಳೆನ್ನೆಮ್ಮೆಗಳೆನ್ನ ಪಶುಗಳೆನ್ನ ಪರಿವಾರಮೆನ್ನ ತೊೞ್ತಿರೆನ್ನ ಮಾಣಿಕ ಭಂಡಾರಂ ಸುವರ್ಣ ಭಂಡಾರಂ [೨೦]ಪಟ್ಟೆಸ ಭಂಡಾರ[೨೦]ಮೆಂದಿವಱೊಳ್ ಮೋಹಿಸಿದ ಬುದ್ಧಿಯನೊಡೆಯನಾಗಿಯಾರ್ತಧ್ಯಾನದಿಂ ಸತ್ತು ಪೆರ್ವಾವಾಗಿ ಪುಟ್ಟಿ[೨೧]ದೊರ್ಡೀಗಳಾ[೨೧]ಮುಂ ಪೆಂಡಿರಾಗಿಯುಮಿನಿವರಿದು ಶ್ರೀಯುಂ ವಿಭವಮು [೨೨]ಮನೆಯ್ದಿದೆಮೆಂದು ಪೇೞ್ದುಂ ತಮ್ಮ ದೇವತ್ವಮಂ ತೋಱಲ್ವೇಡಿ ಆಕಾಶಮೆಲ್ಲಂ ಚಿತ್ರಪಟಂ [೨೩]ಗೆ[೨೩]ದಱಿದಂತೆ ವಿಮಾನಂಗಳಿಂ ಸಂಛನ್ನಮಾಗಿ [೨೪]ವ್ಯಾಪಿಸೆ[೨೪] ಪರಿವಾರದೇ[೨೫]ವಿಯ[೨೫]ರ್ಕಳಿಂದಂ [೨೬]ದೇವರ್ಕಳಿಂದಂ[೨೬] ಗಣಿಕೆಯರ್ಕಳಿಂದ

೧. ದ ಮೇಲಿರ್ಪಾತನೆ (ಚ). ದೊಳಿರ್ಪಾತನೆ (ಘ,ಛ). ೨. ಈಗಳ್ವೆ (ಖ) ಈಗಳ್‌ಬೆ (ಕ,ಗ), ಪೆ (ಘ,ಚ,ಛ). ೩. ಲ್ತಗು ಳ್ಗಳುಂ ವೊ (ಕ,ಗ). ೪. ಬಱುನೆಲದೊಳ್ ಪಡುವೆಯಾದ್ಯೆ (ಘ,ಚ,ಛ). ೫. ಕ್ಕೈ (ಘ,ಛ). ೬. ಳು ಮೊಂ (ಕ,ಖ,ಗ), ಕ್ಕಿಲಿಗಳ್ಮೊಂ (ಘ,ಚ,ಛ). ೭. ಪಟ್ಟಿ (ಘ,ಚ,ಛ). ೮. ವಿಯರ್ಕ (ಕ,ಖ,ಗ). ೯. ಣ್ಣು (ಕ,ಖ,ಗ), ಣ್ (ಘ,ಚ,ಛ). ೧೦. ಮಕ್ಕಳ್ (ಕ,ಖ,ಗ), (ಘ)ದಲ್ಲಿಲ್ಲ. ೧೧. ನ (ಘ,ಚ,ಛ). ೧೨. ರಂ (ಕ,ಖ,ಗ). ೧೩. ಡಡೆ (ಘ,ಚ). ೧೪. ಡನಿಂ (ಘ,ಚ,ಛ). ೧೫. ವರಾ. ೧೬. ದಿವ್ಯ. ೧೭. (ಘ,ಚ,ಛ)ಗಳಲ್ಲಿಲ್ಲ. ೧೮. (ಖ)ದಲ್ಲಿಲ್ಲ. ೧೯. ನೆ (ಘ,ಚ), ರೆ (ಛ). ೨೦. (ಘ,ಚ,ಛ)ಗಳಲ್ಲಿಲ್ಲ. ೨೧. ರ್ದನಾ (ಘ,ಛ), ದರ್ ನಾ (ಚ). ೨೨. +ಂ ದೇವತ್ವಮು (ಘ,ಚ,ಛ). ೨೩. ಕೆ (ಕ,ಖ,ಗ). ೨೪. ಬ್ಯಾಪಿಸೆ (ಕ,ಗ), ಧ್ಯಾನಿಸೆ (ಚ). ೨೫. ವ (ಘ,ಚ,ಛ). ೨೬. (ಘ,ಚ,ಛ)ಗಳಲ್ಲಿಲ್ಲ.

[1]ಮಪ್ಸರಸೆಯರ್ಕಳಿಂದಂ[1] ಪರಿವೇಷ್ಟಿತರಾಗಿ ನಾಲ್ವರುಂ ದೇವರ್ಕಳ್ ಘಂಟಾ ಜಾಳ ಮುಕ್ತಾಜಾಳ[2]ಸಮನ್ವಿತಮಪ್ಪ ರತ್ನಮಯಮಾಗುತ್ತಿರ್ದ ವಿಚಿತ್ರಮಪ್ಪ ವಿಮಾನಂಗಳನೇಱಿ ದೇ[3]ವಿಯ[3]ರ್ಕಳ್ ಚಾಮರಮಿಕ್ಕೆಯಾಟಪಾಟವಿನೋದಂಗಳಿಂದಿಂತು ತಮ್ಮೈಶ್ವರ್ಯಮೆಲ್ಲಮಂ ತೋಱಿ ಇಂತೆಂದರ್ ಇದೆಲ್ಲಮೆಮಗೆ [4]ಜಿನ[4] ಧರ್ಮದ [5]ಪರಮಸತ್ವದ[5] ಪ್ರಸಾದದಿನಾದುದು [6]ಮತ್ತುಪರಿಚರ ಮಹಾರಾಜಂ ಪುರುಷನಾಗಿಯುಂ ಮಹಾಸತ್ವಮನೊಡೆಯನಾಗಿಯುಂ ಮಿಥ್ಯಾತ್ವಂ ಕಾರಣಮಾಗಿಯಾರ್ತಧ್ಯಾನದಿಂ ಸತ್ತು ಪೆರ್ಮಾವಾಗಿ ಪುಟ್ಟಿದನೆಂದು[6] ಪೇಳ್ದು ಮಕ್ಕಳಂ ಪೆರ್ಮಾವುಮಂ ಪ್ರತಿಬೋಧಿಸಿ ತಮ್ಮ ಸ್ವರ್ಗಲೋಕಕ್ಕೆ ವೋದರ್

ಮತ್ತೆ ಪೆರ್ಮಾವೆನ್ನರಸಿಯರ್ಕಳ್ ದೇ[7]ವರಾ[7]ಗಿ ಪುಟ್ಟಿದರೆಂದಾದಮಾನುಂ ಸಂತೋಷಂಬಟ್ಟು ಧರ್ಮಪರಿಣಾಮದೊಳ್ ಕೂಡಿರ್ದುದಂ ಸಾರಸ್ವತ ಭಟಾರ ರಱಿದು ಋಷಿಸಮುದಾಯಂಬೆರಸು ಪೆರ್ಮಾವಿ[8]ರ್ದೆಡೆ[8]ಗೆ ಪೋಗಿ ಇಂತೆಂದು ಧರ್ಮಮಂ ಪೇಳ್ದಪರ್

**ಗಾಹೆ ||** ಸೋ ಧಮ್ಮೋ ಜತ್ಥ ದಯಾ ಸೋ ವಿ ತಓ ವಿಸಯಣಿಗ್ಗಹೋ ಜತ್ಥ |
ದಸ ಅಟ್ಠದೋಸರಹಿಓ ಸೋ ದೇವೋ ಣತ್ಥಿ ಸಂದೇಹೋ ||

ಮತ್ತಂ

**ವೃ ||** ಯತ್ನೇನ ಪಾಪಾನಿ ಸಮಾಚರಂತಿ
ಧರ್ಮಂ ಪ್ರಸಂಗಾದಪಿ ನಾಚರಂತಿ |
ಆಶ್ಚರ್ಯಮೇತದ್ಧಿ ಮನುಷ್ಯ ಲೋಕೇ
ಕ್ಷೀರಂ ಪರಿತ್ಯಜ್ಯ ವಿಷಂ ಪಿಬಂತಿ ||

ಸಮಾಗಮಾಃ ಸ್ವಾವಸಮಾಹಿ ಸರ್ವೇ ವಿಭೂತಯೋಪಿ ಪ್ರತಿಭಂಗುರಾಃ ಸ್ಯುಃ
ಧರ್ಮೋऽರ್ಹತಾಮೇವ ಸುಶಾಶ್ವತೋऽಯಮಿತಿ ಪ್ರಚಿಂತ್ಯಾತ್ಮರತಿರ್ಬಭೂವ ||

ನಿಶ್ಚಯಮುದಿತಸ್ಯ ರವೇಃ ಪತನಂ ಜಾತಸ್ಯ ಮರಣಮಪಿ ಸರ್ವಸ್ಯ |
ತಸ್ಮಾದ್ವಿದುಷಾ ಭಾವ್ಯಂ ಸದೈವ ಜಾತೇನ ಧರ್ಮಕರ್ಮರತೇನ ||

ಪುಷ್ಪ ಫಲಭಾರ ತರುವದ್ಯೌವನ ಬಲ ವಿಭವ ರೂಪ ಸೌಭಾಗ್ಯಾನಿ |
ಗಿರಿಸರಿದಂಭಃ ಪ್ರತಿಮಂ ಸರ್ವೇಷಾಂ ಜೀವಿತಂ ಚ ಧಾವತಿ ಶೀಘ್ರಮ್ ||

**ಗಾಹೆ ||** ಏಗೋ ಯ ಮರದಿ ಜೀವೋ ಏಗೋ ಯ ದಿವಂ ಉವವಜ್ಜ ಇ |
ಏಗೋ ಸ ಜಾಇ ಮರಣಂ ಏಗೋ ಸಜ್ಝಾ ಇ ಣಿರಯಂ [ವಾ] ||

**ಶ್ಲೋ ||** ಕಸ್ಯ ಮಾತಾ ಪಿತಾ ಕಸ್ಯ [ಕಸ್ಯ] ಭಾರ್ಯಾ ಸುತೋಪಿವಾ |
ಜಾತೌ ಜಾತೌ ಹಿ ಜೀವಾನಾಂ ಭವಿಷ್ಯಂತಿ ಪರೇ ಪರೇ ||

ಅರ್ಥಾ ಗೃಹೇಷು ತಿಷ್ಠನ್ತಿ ಶ್ಮಶಾನೇಷು ಚ ಬಾಂಧವಾಃ |
ಶರೀರ ಜ್ವಾಲಮಾಲಾಯಾಂ ಸುಕೃತಂ ದುಷ್ಕೃತಂ ವ್ರಜೇತ್ ||

---

೧. (ಘ,ಚ,ಛ) ಗಳಲ್ಲಿಲ್ಲ. ೨. + ಮೆಮಾಜಾಳಂಗಳಿಂ (ಕ,ಖ,ಗ). ೩. ವ (ಘ,ಚ,ಛ). ೪. ಜೀವ (ಕ,ಗ,ಘ,ಚ). ೫. (ಘ,ಚ,ಛ)ಗಳಲ್ಲಿಲ್ಲ. ೬. (ಕ,ಗ)ಗಳಲ್ಲಿಲ್ಲ. ೭. ವರ್ಕಳಾ (ಘ,ಚ,ಛ). ೮. ರ್ದಲ್ಲಿ (ಘ,ಚ,ಛ).

ಎಂದಿಂತು ಪಿರಿದು ಬೇಗಂ ಧರ್ಮಮಂ [೧]ಪೇೞ್ದು[೧] ಶ್ರಾವಕಬ್ರತಂಗಳನೇಱಿಸಿ ಮತ್ತಮಿಂತೆಂದರ್ ನಿನಗಾಯುಷ್ಯಂ ಪದಿನಯ್ದು ದಿವಸಮೆಂದು ಪೇೞ್ದೊಡಾ ಮಾತಂ[೨] ಕೇಳ್ದು ಆಹಾರ ಶರೀರ[೩]ಕ್ಕಂ[೩] ಜಾವಜ್ಜೀವಂ ನಿವೃತ್ತಿಗೆಯ್ದು ಸಂನ್ಯಸನಂ ಗೆಯ್ದಿರ್ದೊಡದಂ ಭಟಾರರಱಿದನಂತವೀರ್ಯಂಗೆ ಪೇೞ್ದಿರಿದು ಸಂನ್ಯಸನಂ ಗೆಯ್ದಿರ್ದುದಿದರ್ಕೆ ಪೂಜೆಯಂ ಮಾಡಿಮೆನೆ [೪]ಆತನುಂ[೪] ಪಿರಿಯ ಪಂ[೫]ದರಂ[೫] ಮಾಡಿಸಿಯಲ್ಲಿ ನಾನಾ ಪ್ರಕಾರದ ನೇತ್ರ ಪಟ[೬]ಯುಲ್ಲವಂಗ[ಳುಮ]ಂ[೬] [೭]ಧ್ವಜಂಗಳುಮಂ[೭] ಕಟ್ಟಿಸಿ [೮]ದೇವತಾ[೮] ಪ್ರತಿಮೆಯಂ ನಿಱಿಸಿಯಭಿಷೇಕಂ ಗೆಯ್ಯುತ್ತಂ [೯]ಮೂಱು ಪೊೞ್ತುಂ[೯] ಮಹಾಮಹಿಮೆಯಂ ಪೂಜೆಗಳುಮಂ ಪೊ[೧೦]ಡೆ[೧೦]ಮಡಿಸುತ್ತಿರೆ ಭಟಾರರುಮಾರಾಧನೆಯನರ್ಚಿಸಿ ಸ್ವಾಧ್ಯಾಯಂಗೊಂಡಿಂತೆಂದಾರಾಧನೆಯಂ ವಕ್ಖಾಣಿಸಲ್ ತಗುಳ್ದರ್

**ಶ್ಲೋಕ॥** ಸಂನ್ಯಸನೇ[೧೧]ಸ್ತಿ [ಮತಿಯೋರ್?][೧೧] ಪ್ರಾಣೈಃ ಕಂಠಗತೈರಪಿ।
ಸ ಗಚ್ಛೇನ್ಮೋಕ್ಷಸದನಂ ಪುನರಾಗಮವರ್ಜಿತಮ್॥

ಇಹ ಜೀವಕೃತಂ ಪಾಪಂ ಯಚ್ಚ ಪಾಪಂ ಪುರಾಕೃತಂ।
ಸಂನ್ಯಸನೇನ ತತ್ಸರ್ವಂ ದಹತ್ಯಗ್ನಿರಿವೇಂಧನಂ॥

ಅಜ್ಞಾನಭಾವಾತ್ ಕೃತ ಕರ್ಮಭಾರಃ ಸಂನ್ಯಾಸನಾತ್ಸತ್ತ್ರಲಯಂ ಪ್ರಯಾತಿ।
ಮುಹೂರ್ತಕಾಲೇ ಹೃದಯೇ ಲಲಾಟೇ ಜೀವಂ ಕರಂ ನ್ಯಸ್ಯ ಸಮುಸ್ಥಿತಸ್ಯ॥

**ಗಾಹೆ॥** ಉಡ್ಢಮಹೇ ತಿರಿಯಮ್ಹಿ ಯ ಮದಾಣಿ ಯಕಾಮುಗಾಣಿ ಮರಣಾಣಿ।
[೧೨][ದಂಸಣ ಣಾಣ ಸಮುಗ್ಗೋ][೧೨] ಪಂಡಿಯ ಮರಣಂ ಅಣುಮಲಿಸ್ಸಂ॥

[೧೩][ಪು][೧೩]ವ್ವೇ ಮರಣಂ ಜಾಈ ಮರಣಂ ಣಿರಯೋ ಸುವೇದಣಾಓ ಯ।
ಏದಾಣಿ ಸಂಚರಂತೋ ಪಂಡಿಯ ಮರಣಂ ಅಣುಮಲಿಸ್ಸಂ॥

ಎಕ್ಕಂ ಪಂಡಿಯ ಮರಣಂ ಛಿಂದಇ ಜಾಈಸದಾಣಿ ಬಹುಗಾಣಿ।
ತಂ ಮರಣಂ ಮರಿದವ್ವಂ ಜೇಣ ಮದಂ ಸುಮ್ಮದಂ ಹೋಇ॥

ಜಇ ಉಪ್ಪಜ್ಜಇ ದುಕ್ಖಂ ತೋ ದಟ್ಠವ್ವೋ ಸಭಾವದೋ ಣಿರಯೇ।
ಕದಮಂ ಮಏ ಣ ಪತ್ತಂ ಸಂಸಾರೇ ಸಂಸರಂತೇಣ॥

ಸಂಸಾರಚಕ್ಕವಾಳಮ್ಹಿ ಮಏ ಸವ್ವೇ ಪೊಗ್ಗಳಾ ಬಹುಸೋ।
ಆಹಾರಿದಾ ಯ ಪರಿಣಾಮಿದಾ ಯ ಣ ಚ ಮೇ ಗದಾ ತಿತ್ತೀ॥

ಆಹಾರಣಿಮಿತ್ತಂ ಕಿರ ಮಚ್ಛಾ ಗಚ್ಛಂತಿ ಸತ್ತಮಂ ಪುಢವಿಂ।
ಸಚ್ಚಿತ್ತೋ ಆಹಾರೋ ಣಖಮದಿ ಮಣಸಾ ವಿ ಪತ್ಥೇದುಂ॥

ತಣಕಟ್ಠೇಣ ವ ಅಗ್ಗೀ ಲವಣಸಮುದ್ದೋ ಣದೀಸಹಸ್ಸೇಹಿಂ।
ಣ ಇಮೋ ಜೀವೋ ಸಕ್ಕೋ ತಪ್ಪೇದುಂ ಕಾಮಭೋಗೇಹಿಂ॥

---

೧. ಕೇಳ್ದು (ಕ,ಖ,ಗ). ೨. + ನಂಬಿ (ಚ). ೩. ಕ್ಕೆ (ಘ,ಛ). ೪. ಯಾದವಮಾನುಂ (ಘ,ಚ,ಛ). ೫. ಡಮಂ (ಖ), ಟಪಮಂ (ಕ,ಗ) ೬. ಯುಲ್ಲರಂಗಳುಂ (ಕ,ಖ,ಗ), ಯುಲ್ಲವಂಗಳ್ಮಂ (ಘ,ಛ), ಯುಂಲ್ಸಂಗಳಂ (ಚ). ೭. (ಘ,ಚ,ಛ)ಗಳಲ್ಲಿಲ್ಲ. ೮. ಸರ್ವಜ್ಞ (ಘ,ಚ,ಛ). ೯. (ಕ,ಖ,ಗ,ಘ)ಗಳಲ್ಲಿಲ್ಲ. ೧೦. ಜಿ (ಖ,ಚ,ಛ). ೧೧. ಸ್ತಿಮಿತಯೋ ಮ್ರಾಯಾತ್ (ಕ,ಖ,ಗ,ಘ), ಸ್ತಮಿತೇ ಭ್ರೂಯಾತ್ (ಚ,ಛ). ೧೨. ದಂಸಣಾಣ ಸಹಗದೋ (ಕ,ಖ,ಗ), ದಂಸಣಾಣ ಸಹದೋ (ಘ,ಚ), ದಂಸಣ ಣಾಣ ಸಹದೋ (ಛ). ೧೩. ಉ (ಸ).

ಜಹ ಜಹ ಭುಂಜಇ ಭೋಗೇ ತಹ ತಹ ಭೋಗೇಸು ವಡ್ಢದೇ ತಣ್ಹಾ ।
ಅಗ್ಗೀವ ಇಂಧಣಾಇಂ ತಣ್ಹಂ ದೀ[೧][ವ][೧]ಂತಿ ಸೇ ಭೋಗಾ ॥

ವೃ॥ ಸಲವಣರಸಮಂಭೋ ಭುಜ್ಯಮಾನಂ ತೃಷಾರ್ತೈ
ರಧಿಕತರ ತೃಷಾರ್ತಾನ್ ದುಃಖಿತಾನೇನ ಕುರ್ಯಾತ್ ।
ವಿಷಯ ಸುಖಮಪೀದಂ ಭುಜ್ಯಮಾನಂ ತೃಷಾರ್ತೈ
ರಧಿಕತರ ತೃಷಾರ್ತಾನ್ ದುಃಖಿತಾನೇನ ಕುರ್ಯಾತ್ ॥

ಆರ್ಯೆ॥ ಯದ್ಯಪಿ ನಿಷೇವ್ಯಮಾಣಾ ಮನಸಸ್ಸಂತುಷ್ಟಿಕಾರಕಾ ವಿಷಯಾಃ ।
ಕಿಂಪಾಕಫಲಾಶನವದ್ಭವಂತಿ ಪಶ್ಚಾದತಿ ದುರಂತಾಃ ॥

ವೃ॥ ಮದುರ್ಮಂ ಮಂತ್ರ[೨]ಮುಮಿ[೨]ಷ್ಟದೇವತೆಗಳುಂ ದಿವ್ಯಾಸ್ತ್ರಮುಂ ಕೋಂಟೆಯುಂ
[೩]ಗುದುರ್ಮಂ[೩] ಪೊರ್ದಿದ ಚಾತುರಂಗ ಬಲಮುಂ ಮೆಯ್ಗಾಪುಮಾ ವೇಳೆಗೊಂ ।
ಡಿರ್ದತ್ಯುಗ್ರ [೪]ಭಟರ್ಕಳುಂ[೪] ಕವಚಮುಂ ಮಿತ್ರರ್ಕಳುಂ [೫]ಮಿಟ್ಟು[೫] ಮೇ
[೬]ಲೆ[೬]ರ್ದಾಗಳ್ ಶರಣಪ್ಪೊ[೭]ಡೆ[೭]ೀಕೆ ಮ[೮]ಡಿದ[೮]ರ್ ಪನ್ನಿ[೯]ರ್ವ[೯]ರುಂ ಚಕ್ರಿಗಳ್ ॥

ಸಾವನಿತೊಂದವಸ್ಥೆ ತನಗಾ[೧೦]ದೆ[೧೦]ಡೆಯೊಳ್ ತಱಿಸಂದು ತತ್ವಮಂ
ಭಾವಿಸಿ ಬಾಹ್ಯವಸ್ತುಗಳೊಳೊಂದದೆ ತನ್ನೊಳೆ ನಿಂದು ಕರ್ಮ[೧೧]ವಿ[೧೧] ।
ಶ್ರಾವಣೆಯಿಂ ವಿಶೋಧಿ ದೊರೆಕೊಂ[೧೨]ಡಿರೆ[೧೨] ಗೆಲ್ದು ಪರೀಷಹಂಗಳಂ
ಜೀವಮನಿಂತು ಸಂತಮೋ[೧೩]ಡ[೧೩]ಲಿಂ ಕಳೆ[೧೪]ಗೆಂ[೧೪]ಬುದು ಜೈನ ಶಾಸನಂ ॥

ಆರೊಳಮಿಲ್ಲ ಮೋಹಮೆನಗೆನ್ಗೆ ಜಿನೇಂದ್ರಪದಂಗಳುಗ್ರ ಸಂ
ಸಾರಹರಂಗಳೆನ್ಗೆ ಪೆಱ[೧೫]ತ್ತ[೧೫]ಲ್ಲೆನ[೧೬]ಗೆನ್ನ ಜೀವಲ್ಲದೆನ್ಗೆ[೧೬] ನಿಂ ।
ದಾರಯೆಃ ಧರ್ಮಮೊಂದೆ ಶರಣೆನ್ಗೆ ಪಲಾಲಮನೊಲ್ಲೆ ನಿನ್ ನಮ
ಸ್ಕಾರಮೆ ಸಾಲ್ಗುಮೆ[೧೭]ನ್ಗಿ[೧೭]ನಿತನೆನ್ಗೆ ನಲಾರ್ಪೊಡೆ ಜೀವಿತಾಂತ್ಯದೊಳ್ ॥*

ಗಾಹೆ॥ ಜಿಣವಯಣಮೋಸಹಮಿಣಂ ವಿಸಯಸುಹ ವಿರೇಯಣಂ ಅಮುದಭೂದಂ ।
ಜರಮರಣ ಜಮ್ಮವಾಹಿ ಸು[೧೮][ಹ][೧೮]ಕರಣಂ ಸವ್ವ ಜೀವಾಣಂ ॥

ಎಕ್ಕಮ್ಹಿ ಭವಗ್ಗಹಣೇ ಸಮಾಹಿಮರಣಂ [೧೯][ಮರೇಜ್ಜ][೧೯] ಜದಿ ಜೀವೋ ।
ಸತ್ತಟ್ಠ ಭವಗ್ಗಹಣೇ ಣಿವ್ವಾಣಮಣುತ್ತರಂ ಲಹಇ ॥

ಸತ್ತಕ್ಖರ ಸಜ್ಝಾಯಂ ಅರಹಂತಾಣ ಣಮೋ ತ್ತಿ ಭಾವೇಣಂ ।
ಜೋ ಕುಣಇ ಅಣ್ಣಮಣಃ ಸೋ ಪಾವಇ ಸವ್ವಕಲ್ಲಾಣಂ ॥

ಏಸೋ ಪಂಚಣಮೊಕ್ಕಾರೋ ಸವ್ವಪಾವಪಣಾಸಣೋ ।
ಮಂಗಳೇಸು ಯ ಸವ್ವೇಸು ಪಢಮಂ ಹವಇ ಮಂಗಳಂ ॥

೧. ಹೋಂ (ಸ). ೨. ಮರಿ (ಕ,ಗ). ೩. ದುರ್ಗ್ಗರ್ಮಂ (ಕ,ಖ,ಗ), ಗುರ್ದಿಂ (ಚ). ೪. (ಕ) ದಲ್ಲಿ ತ್ರುಟಿತ. ೫. ಮಿತ್ತು (ಕ,ಗ), ಮೃತ್ಯು (ಖ). ೬. ಲಿ (ಕ,ಖ,ಗ). ೭. ರೇ (ಚ). ೮. ರಿದ (ಕ,ಖ,ಗ), ಡಿವ (ಛ). ೯. ಬ್ಬರ್ (ಕ,ಖ,ಗ). ೧೦. ವೆ (ಕ,ಖ,ಗ). ೧೧. ನಿ (ಕ,ಖ,ಗ). ೧೨. ಡೊಡೆ (ಕ,ಖ,ಗ). ೧೩. ದ (ಕ,ಖ,ಗ). ೧೪. ಯೆಂ (ಕ,ಖ,ಗ). ೧೫. ದಿ (ಕ,ಖ,ಗ). ೧೬. ಗಾನೆಯೆಂ (ಘ,ಛ), ಗಾಱನೆಯೆಂ (ಚ). ೧೭. ಂಬಿ (ಕ,ಖ,ಗ). * ಈ ಪದ್ಯದಲ್ಲಿ ಎಲ್ಲೆಡೆಯಲ್ಲಿಯೂ 'ನ್ಗೆ'ಗೆ ಬದಲಾಗಿ 'ಂಗೆ' ಎಂದು ಎಲ್ಲಾ ಪ್ರತಿಗಳಲ್ಲಿಯೂ ಇದೆ. ೧೮. ಯು (ಸ). ೧೯. ಅವೆಜ್ಜ (ಖ,ಗ), ಆಹಿಜಹಿ (ಘ), ಲಹೇಜಹಿ (ಚ), ಲಹೇಜಇ (ಛ).

ಭಾವಣಮೊಕ್ಕಾರಗದೋ ಝಾಯಂ ಜೋ ಣಿಯಮಿಯಮ್ಮಿ ಚಿತ್ತಮ್ಮಿ।
ಏ ಅಗ್ಗೇಣ ವಿಸುದ್ಧೋ ತೋ ಹೋಹಿಸಿ ಮೋಕ್ಖಸುಹಭಾಈ॥

ಆರ್ಯೆ॥ ಗುರುಮೂಲೇ ಯತಿನಿಕಟೇ ಚೈತ್ಯೇ ಸಿದ್ಧಾಂತವಾರ್ಧಿ ಸದ್ಘೋಷೇ।
ಮಮ ಭವತು ಜನ್ಮಜನ್ಮನಿ ಸಂನ್ಯಸನಸಮನ್ವಿತಂ ಮರಣಂ॥

ಎಂದಿಂತಾರಾಧನೆಯಂ ಪದಿನಯ್ದು ದಿವಸಂ[೧] ವಕ್ಖಾಣಿ[೨]ಸೆ[೨] ಧರ್ಮಾನುರಾಗದಿಂ ಕೇಳ್ದು ಮುಡಿಪುವಾಗಳ್ ವಜ್ರದಾ[೩]ಡಂ[೩] ದುರಾತ್ಮಂ ನಿಷ್ಕಾರಣ[೪]ಮೆನ್ನಂ[೪] ಕೊಂದನೆಂದು ಮನದೊಳ್ [೫]ರೋ[೫]ಷಮಂ ಬಗೆದು ಮುಡಿಪಿ ಭವನವಾಸಿಗಲೋಕದೊಳ್ [೬]ನೂ[೬]ಱು ಪಳಿತೋಪಮಾಯುಷ್ಯಮನೊಡೆ[೭]ಯೊಂ[೭] ನಾಗೇಂದ್ರ ದೇವನಾಗಿ ಪುಟ್ಟಿದೊಂ

ಮತ್ತನಂತವೀರ್ಯನುಂ ಭಟಾರರ್ ಪೇ[೮]ಟ್ಟ[೮] ಧರ್ಮಶ್ರವಣಮಂ ಕೇಳ್ದು ಧರ್ಮದ ಫಲದಿಂದಂ ತಮ್ಮ ತಾಯ್ವಿರ್ಕಳ್ ದೇವಗತಿಯೊಳ್ ಪಿರಿದು ವಿಭೂತಿಯನೊಡೆಯೊರ್ ದೇವ[೯]ರ್ಕಳಾ[೯]ಗಿ ಪುಟ್ಟಿದುದುಮಂ ಕಂಡು [೧೦]ರಾಜ್ಯವಿಮೋಹದಿಂ[೧೧]ತಂದೆಯ[೧೧] ಪೊಲ್ಲಗತಿಯೊಳ್ ಪುಟ್ಟಿದುದುಮಂ ಕಂಡು* ಮನುಷ್ಯಜನ್ಮದುರ್ಲಭತ್ವಮುಮಂ[೧೨] ಭೋಗೋಪಭೋಗಂಗಳೊಳಪ್ಪನಿತ್ಯತ್ವಮು[೧೩]ಮಂ[೧೩] ಮನದೊಳ್ ಬಗೆದು ಸಂಸಾರ ಶರೀರ [೧೪]ಭೋಗದೊಳಪ್ಪ[೧೪] ವೈರಾಗ್ಯಮನೊಡೆಯನಾಗಿ ಸುಬಾಹುವೆಂಬ ತನ್ನ ಪಿರಿಯ ಮಗಂ ತನ್ನೊಡನೆ ತೊಱೆಯಲ್ ಬಗೆದಿರ್ದೊನಂ ಬಾರಿಸಿ ಬಲ್ಲಾಳ್ತನದಿಂ ರಾಜ್ಯಪಟ್ಟಂಗಟ್ಟಿ ಸಂಕ್ಷೇಪದಿಂ ರಾಜ್ಯ[೧೫]ನೀತಿಯ[೧೫]ನಿಂತೆಂದು ಕ†ಲ್ಪಿ†ಸಿದಂ

ವೃ॥ ತೃಷ್ಣಾಂ [೧೬]ಛಿಂಧಿ[೧೬] ಭಜ ಕ್ಷಮಾಂ ತ್ಯಜ ಮದಂ ಪಾಪೇ ರತಿಂ ಮಾ ಕೃಥಾಃ
ಸತ್ಯಂ ಬ್ರೂಹ್ಯನುಯಾಹಿ ಸಾಧು ಪದವೀಂ ಸೇವಸ್ವ ವಿದ್ವಜ್ಜನಂ।
ಮಾನ್ಯಾನ್ ಮಾನಯ ವಿದ್ವಿಷೋಽಪ್ಯನುನಯ ಪ್ರಖ್ಯಾಪಯ ಪ್ರಶ್ರಯಂ
[೧೭]ಕೀರ್ತಿಂ[೧೭] ಪಾಲಯ ದುಃಖಿತೇ ಕುರು ದಯಾಮೇತತ್ಸ[೧೮]ತಾಂ[೧೮] ಚೇಷ್ಟಿತಂ॥

ಎಂದಿಂತು ಮ[೧೯]ಗನಂ ಕಲ್ಪಿಸಿ[೧೯] ಎಲ್ಲರೊಳಂ ನಿಶ್ಶಲ್ಯಂಗೆಯ್ದು ಬಾಹ್ಯಾಭ್ಯಂತರ ಪರಿಗ್ರಹಂಗ[೨೦]ಳಂ[೨೦] ತೊಱೆದು ಪಲಂಬರರಸು ಮಕ್ಕಳ್ವೆರಸು ಸಾರಸ್ವತ ಭಟಾರರ ಪಕ್ಕದೆ ತಪಂಬಟ್ಟು ಉಗ್ರೋಗ್ರ [೨೧]ಘೋರವೀರ[೨೧] ತಪಶ್ಚರಣಂಗೆಯ್ದು ಸಮ್ಮೇದ ಪರ್ವತದ ಮೇಗಿ[೨೨]ರ್ದೆಂ[೨೨]ಟು ಕರ್ಮಂಗಳಂ ಕಿಡಿಸಿ ಮೋಕ್ಷಕ್ಕೆ ಪೋದ[೨೩]ನ್[೨೩]

---

೧. + ನಿರಂತರಂ (ಘ,ಚ,ಛ). ೨. ಸುತ್ತಂ (ಕ,ಗ,ಘ). ೩. ಡನೆಂಬ (ಘ,ಚ). ೪. (ಘ,ಚ,ಛ)ಗಳಲ್ಲಿಲ್ಲ. ೫. ದ್ವೇ (ಘ,ಚ,ಛ). ೬. ಮೂ (ಘ,ಚ,ಛ). ೭. ಯ (ಕ,ಖ,ಗ). ೮. ಳ (ಘ,ಚ,ಛ). ೯. ರಾ (ಘ,ಚ,ಛ). ೧೦. + ಮತ್ತಂ (ಘ,ಚ,ಛ). ೧೧. ತನ್ನ ತಂದೆ (ಘ,ಚ,ಛ). * + ಮತ್ತಂ (ಘ,ಚ,ಛ). ೧೨. + ಶರೀರದ ಶುಚಿತ್ವಮುಮಂ (ಖ). ೧೩. ಮನಿಂತಿನಿತುವರಂ (ಘ,ಚ,ಛ). ೧೪. ಕ್ಕೆ ಪೇಸಿ (ಘ,ಚ,ಛ). ೧೫. ಸ್ಥಿತಿಯ ನೀತಿಯನೀತಿಯ (ಚ). † ಲಿ (ಘ,ಛ), ಲಿ (ಚ). ೧೬. ತೋದಿ (ಕ,ಖ,ಗ). ೧೭. ಮಂತ್ರಿಂ (ಕ,ಖ,ಗ). ೧೮. ದಾ (ಕ,ಖ,ಗ). ೧೯. ಗಂಗೆ ಕಲ್ಪಿ (ಘ,ಚ,ಛ). ೨೦. ಳೆಲ್ಲಮಂ (ಘ,ಚ,ಛ). ೨೧. (ಘ,ಚ,ಛ)ಗಳಲ್ಲಿಲ್ಲ. ೨೨. ದುರ್ಸಮ್ಯಗ್ ದರ್ಶನ ಜ್ಞಾನ ಚಾರಿತ್ರಂಗಳಂ ಸಾದಿಸಿಯೆಂ (ಘ,ಚ,ಛ). ೨೩. ರ್ (ಘ,ಚ,ಛ).

ಮತ್ತಿತ್ತ ಧರಣೇಂದ್ರನೊಂದು ದಿವಸಂ ಜಿನೇಂದ್ರ ಚೈತ್ಯಾಲಯಂಗಳಂ [೧]ಬಂ[೧]ದಿಸಲ್ವೇಡಿ ಮಂದರಗಿರಿಗೆ ವಿಮಾನಮನೇಱಿ ಪೋ[೨]ಪಾಗಳ್[೨] ವಜ್ರದಾಡಂ ಮತ್ತಗ್ಗಳಮ[೩]ಪೂರ್ವಮಪ್ಪ[೩] ವಿದ್ಯೆಗಳಂ ಸಾಧಿಸಲ್ವೇಡಿ ಕಳತ್ರ ಸಹಿತಂ ವಿಮಾನಮನೇಱಿ ಮಂದರಗಿರಿ[೪]ಗೆ ವಂದಾತನಂ ಕಂಡು ತನ್ನ ವಿಭಂಗ ಜ್ಞಾನದಿಂದೆನ್ನ ಪಗೆವನೀತನೆಂದಱಿದೆಲವೊ ಪಾಪಕರ್ಮಾ ನಿಷ್ಕಾರಣಮೆನ್ನಂ ಜಲಕ್ರೀಡೆಯಾಡುವೊನಂ ಕಳತ್ರ ಸಹಿತಂ ಕೊಂದೆಯೆಂದು ಮೂದಲಿಸಿಯಾತನ ವಿದ್ಯೆ[೫]ಯೆ[೫]ಲ್ಲಮಂ ಕೊಱೆದಿಕ್ಕಿ ಕಳತ್ರಸಹಿತಂ ಪಿಡಿದೆತ್ತಿಕೊಂಡು ಪೋಗಿ ಸಮುದ್ರ ದೊಳ್ ಮಹಾ ಪಾತಾಳ[೬]ದ ಮೊದಲೊ[೬]ಳಿಕ್ಕಿ ಪುಡುಕುನೀರ[೭]ಟ್ಟುದ್ದತ್ತಂ[೭] ಪಿರಿದುಂ ಬೇಗಂ ದುಃಖಮನೆಯ್ದಿಸಿ ಕಾಡಿ ಕೊಲೆಯಾ[೮]ತಂ ಸತ್ತು[೮] ಪ್ರಥಮ ನರಕದೊಳತಿ ಘೋರಮಪ್ಪುದಱೊಳ್ [೯]ಖಳ ಖಳಮೆಂ[೯]ಬ ನರಕ ಬಿಲದೊಳ್ [೧೦]ನೂ[೧೦]ಱು ಪಳಿತೋಪಮಾಯುಷ್ಯಮನೊಡೆಯೊಂ ನಾರಕನಾಗಿ ಪುಟ್ಟಿಯಲ್ಲಿಯ ದುಃಖಂಗಳೆಲ್ಲ ಮನನುಭವಿಸಿಯಾಯುಷ್ಯಾಂತದೊಳ್ ಪೊಱಮಟ್ಟು ಬಂದು ಪಿರಿದಪ್ಪ ನೀಲಗಿರಿ ಯೆಂಬ ಪರ್ವತ[೧೧]ದೊ[೧೧]ಳ್ ಪುಲಿಯಾಗಿ ಪುಟ್ಟಿದೊಂ ಧರಣೇಂದ್ರನುಮಾಯು ಷ್ಯಾಂತದೊಳ್ ಬಂದು ಕುರುಜಾಂಗಣಮೆಂಬ [೧೨]ನಾಡೊ[೧೨]ಳ್ ಹಸ್ತಿನಾಪುರ ಮೆಂಬುದು ಪೊಟಲದನಾಳ್ವೊನಿಕ್ಷ್ವಾಕು ವಂಶದ ವಿಜಯದತ್ತನೆಂಬರಸಂಗಂ ವಿಜಯಮತಿ ಮಹಾದೇವಿಗಂ ಗುರುದತ್ತ[೧೩]ನಾಗಿ ಪುಟ್ಟಿದೊಂ

ಒಂದು ದಿವಸಂ ಪುತ್ರಾರ್ಥಿಯಪ್ಪ ವಿಜಯ *ಮಹಾದೇವಿ[೧೪]ಯಿಂ[೧೪] ಬೆಸ ಗೊಳಿಪಟ್ಟ ಗುರು[೧೫]ಗಳೆಂ[೧೫]ಬ ಋಷಿಯ[೧೬]ರಾ[೧೬]ದೇಶದಿಂ ಪುಟ್ಟಿದೊಂ ಗುರು ಗಳಿತ್ತರಪ್ಪುದಱಿಂದಾತಂಗೆ ಪಿತೃ ಮಾತೃಗಳ್ ಗುರುದತ್ತನೆಂದು ಪೆಸ[೧೭]ರ ನಿಟ್ಟರ್[೧೭] ಮ[೧೮]ತ್ತೀಟು[೧೮] ವರ್ಷದೊಳಗೆ ಚತುಷ್ಷಷ್ಟಿ ಕಳೆಗಳುಂ ದ್ವಾಸಪ್ತತಿ ವಿಜ್ಞಾನಂಗ[೧೯]ಳು[ಮನೆ]ಲ್ಲಮಂ[೧೯] ನಿರವಶೇಷಂ ಕಲ್ತಾದಮಾನುಂ ರೂಪುಂ ತೇಜಮುಂ ಗಾಡಿಯುಂ ಸೌಭಾಗ್ಯಮನೊಡೆಯನಾಗಿ[೨೦]ದೆಣ್ಂ[೨೦]ಟನೆಯ ವರುಷ ದಂದು ಗುರುದತ್ತಂಗೆ ವಿಜಯದತ್ತ ನೃಪತಿ ರಾಜ್ಯಪಟ್ಟಂಗಟ್ಟಿ ಸುಧರ್ಮರೆಂಬ ಭಟಾರರ ಪಕ್ಕದೆ ತಪಂಬಟ್ಟನಿತ್ತ ಗುರುದತ್ತ ಕುಮಾರನರಸನಾಗಿ [೨೧]ಸಿಂಹಾಸನ ಮಸ್ತಕಸ್ಥಿತನಾಗಿ[೨೧] ತಂದೆಗೆಂ[೨೨]ತ[೨೨]ಪ್ಪೊಡಂ ಕಪ್ಪಂ[೨೩]ಗೊ[೨೩]ಡದ ಮಂಡಳಿ ಕರ್ಕಳ ಮೇಗೆ[೨೪]ತ್ತಿ ವೊಟ್ಟೆಯಿ[೨೪]ಸಿಱಿದು ಮಂಡಲಂಗ[೨೫]ಳುಂ ದುರ್ಗ[೨೫]ವಸ್ತು

೧. ವಂ (ಗ,ಭ). ೨. ದೊಡಾತಂ (ಕ,ಖ,ಗ). ೩. ಪ್ಪ (ಘ,ಭ), ಪ್ಪ ಸರ್ವ (ಚ). ೪. + ಯ ಮೇ (ಘ,ಚ,ಭ). ೫. ಗಳೆ (ಘ,ಚ,ಭ). ೬. ದೊ (ಘ,ಚ,ಭ). ೭. ದುರ್ತ್ತುಂ (ಘ,ಚ,ಭ). ೮. ತನುಂ (ಘ,ಚ,ಭ). ೯. ಕಳಕಳಮೆಂ (ಘ,ಭ), ಕಳಮೆ ಕಳಮೆಯೆಂ (ಚ). ೧೦. ಮೂ (ಖ,ಚ,ಭ). ೧೧. ದ ಗುಹೆಯೊ (ಘ,ಚ,ಭ). ೧೨. ದೇಶದೊ (ಭ). ೧೩. + ನೆಂಬ ಮಗ (ಚ), ನೆಂಬೊ (ಭ). * + ಮತಿ (ಘ,ಚ,ಭ). ೧೪. ಯುಂ (ಕ), ಯೆಂ (ಖ), ಯುಂ (ಚ,ಭ). ೧೫. ದತ್ತರೆಂ (ಚ). ೧೬. ರುಪ (ಘ,ಚ,ಭ). ೧೭. ರನಿಟ್ಟು (ಕ,ಗ), ರಿಡೆ (ಘ,ಭ). ೧೮. ತ್ತೇಳೆಂಟು (ಘ), ತ್ತೆಂಟು (ಭ). ೧೯. ಳುಂ ಎಲ್ಲಮಂ (ಕ,ಖ,ಗ), ಳ್ಮಂ (ಘ,ಭ), (ಚ) ದಲ್ಲಿ ತ್ರುಟಿತ. ೨೦. ಳ್ದಂದೆಂ (ಕ,ಖ,ಗ). ೨೧. (ಘ,ಭ)ಗಳಲ್ಲಿಲ್ಲ. (ಚ)ದಲ್ಲಿ ತ್ರುಟಿತ. ೨೨. ದ (ಖ,ಭ). ೨೩. ಗು(ಭ). ೨೪. ತ್ತಿ ಮೊಟ್ಟೈ (ಕ,ಗ), ದೊರ್ಟ್ಟೈ (ಘ,ಭ), (ಚ) ದಲ್ಲಿ ತ್ರುಟಿತ. ೨೫. ಳು ಮಗ್ಗಳದ (ಘ,ಚ,ಭ).

ವಾಹನಂಗಳುಂ [೧]ಸಮಸ್ತಂ[೧] ಕಪ್ಪಂಗೊಂಡೆಲ್ಲರುಮನಂಜಿಸಿ ಯಶಮುಂ ಕೀರ್ತಿಯುಮನೊಡೆಯನಾಗಿ [೨]ಇಂತು[೨] ಪೃಥಿವೀರಾಜ್ಯಂಗೆಯ್ಯುತ್ತಿರ್ಪನ್ನೆಗಮ್

ಒಂದು ದಿವಸಂ ಪುಲಿಯುಪದ್ರವಮಂ ನಾಡವ[೩]ರ್ವಂದಿಂ[೩]ತೆಂದು ಪೇೞ್ದಿರ್ ದೇವಾ ನೀಲಗಿರಿಯೆಂಬ ಪರ್ವತದ ಬ[೪]ಳಸಿಯುಮಿ[೪]ರ್ದ ನಾಡೆಲ್ಲಂ ಪಾೞಾದುದಾ ಪರ್ವತದ ಗುಹೆಯೊಳೊಂದು ಪೆರ್ಬುಲಿಯಿರ್ದುದು ನಾಡೆಲ್ಲರುಮಂ ಜವನ ರೂಪಿನೊ[೫]ಳ್ ಕೊಂದುದಪ್ಪು[೫]ದಾರಪ್ಪೊಡಂ ನಾಡೊಳಿರಲಣ್ಮ[೬]ರೆಂದೊ[೬]ಡಾ ಮಾತಂ ಕೇಳ್ದು ಪೂರ್ವವೈರಂ ಕಾರಣಮಾಗಿ ಕ್ರೋಧಾಗ್ನಿ ಪೆರ್ಚಿ ಕಡುಮುಳಿದು ಪುಲಿಯಂ ಕೊಲಲೆಂದು ಪಯಣಂಬೋಗಿ ಪುಲಿಯಿರ್ಪ ಗುಹೆಯ ನೆಯ್ದಿ[೭]ಯದಂ[೭] ಬಳಸಿಯು[೮]ಂ ಮುತ್ತೆ ಮಹಾ ಸಮುದ್ರದ ಗರ್ಜನೆ[೯]ಯನೆ[೯]ಪೋಲ್ವ ಜ[೧೦]ನರವ*ಮುಂ* ಪಟು ಪಟಹ ಶಂಖ ತಾಳ ಮರ್ದಳ ಕಹಳಾದಿ ಧ್ವನಿಗ[೧೧]ಳು ಮನೆನಿತೆನಿತನಾ[೧೧] ಪುಲಿ ಕೇಳ್ಗುಮನಿತನಿತಂಜಿ ಗುಹೆಯೊಳಡಂಗಿ[೧೨]ರ್ದತ್ತು[೧೨] ಪೊಱಮಡಲೊಲ್ಲದಿರ್ದೊಡಾ ಗುಹೆಯ ಬಾಗಿಲೊಳೆನಿತಾನುಂ ಪುಲ್ಲುಂ ಪುಳ್ಳಿ[೧೩]ಯುಮ[೧೩]ನೊಟ್ಟಿ ಕಿಚ್ಚಂ ತಗುಳ್ಚಿ ಪುಲಿಯಂ ಸುಟ್ಟು ಕೊಂದು ತನ್ನ ಪೊೞಲ್ಗೆ ವೋಗಿ ಅರಸುಗೆಯ್ಯುತ್ತಿ[೧೪]ರ್ದನಾ[೧೪] ಪುಲಿ[೧೫]ಯುಂ ಕರ್ಮ[೧೫]ನಿರ್ಜರೆಯಿಂ ಸತ್ತು ಸುರಾಷ್ಟ್ರವಿಷಯದೊಳ್ ದ್ರೋಣಿಮಂತಮೆಂಬ ಪರ್ವತದ ಸಾರೆ ಪಲ್ಲಿಖೇಡಮೆಂಬೂರೊಳ್ [೧೬]ಸಲಿದಾಭರಣ[೧೬]ನೆಂಬ ಪಾರ್ವಂಗಂ [೧೭]ಕಟುಕಿ[೧೭]ಯೆಂಬ ಪಾರ್ವಂತಿಗಂ [೧೮]ಹ[೧೮]ಳಮುಖನೆಂಬೊಂ ಮಗನಾಗಿ ಪುಟ್ಟಿದೊಂ

ಮತ್ತಿತ್ತಂಗಮೆಂಬುದು ನಾಡಲ್ಲಿ ಚಂಪಾನಗರಮೆಂಬುದು ಪೊೞಲದನಾಳ್ವೊಂ ಧಾತ್ರಿವಾಹನನೆಂಬರಸನಾತನ ಮಹಾದೇವಿ ಶ್ರೀಮತಿಯೆಂಬೊಳಾಯಿರ್ವ್ವರ್ಗ್ಗಂ ಮಗಳಭಯಮತಿಯೆಂಬೊಳಾಕೆಯತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ಹಾವ ಭಾವ ವಿಲಾಸ ವಿಭ್ರಮಂಗಳನೊಡೆಯೊಳಾಕೆಯಂ ಗುರುದತ್ತನೆನಿತಾನುಂ ಸೂೞ್ ಬೇಡಿ[೧೯]ಯಟ್ಟಿದೊ[೨೦]ಡರಸಂ ಕುಡಲೊಲ್ಲನಂ[೨೦]ತವರ್ಗಳಿಷ್ಟ ವಿಷಯ ಕಾಮ ಭೋಗಂಗಳನನುಭವಿಸುತ್ತಂ ಕಾಲಂ ಸಲೆ

ಮತ್ತೊಂದು ದಿವಸಂ ಧಾತ್ರಿವಾಹನ ನೃಪತಿ ತನ್ನ ಬಡಗಿ[೨೧]ಗಳ್[೨೧] ವಿಶ್ವಕರ್ಮನುಂ ವಿಶ್ವಮತಿಯುಮೆಂ[೨೨]ಬೊರಂ[೨೨] ಕ[೨೩]ರೆಯಿ[೨೩]ಸಿಯಿಂತೆಂದನಱುದಿಂಗ[೨೪]ಳೊ[೨೪]ಳಗೆ ನೀಮಿರ್ವರುಮೋರೊರ್ವರಯ್ನೂ[೨೫]ಱು[೨೫] ರಥಂಗಳಂ ಬೇಗಂ

---

೧. (ಘ,ಚ,ಛ) ಗಳಲ್ಲಿಲ್ಲ. ೨. ಸಿಂಹಾಸನ ಮಸ್ತಕಸ್ಥಿತನಾಗಿಂತು (ಘ,ಛ), ಸಿಂಹಾಸನ ಮಸ್ತಕನಾಗಿಂತು (ಚ). ೩. ರೆಲ್ಲಮಿಂ (ಚ), ರಿಂ (ಛ). ೪. ಳಿಯಲಿ (ಚ). ೫. ಳ್ ಕೊಂಡುದ (ಖ), ಳಿರ್ದು ಕೊಂದಪು (ಘ,ಛ), ಳಿರ್ದು (ಚ). ೬. ರೆಂದು ಪೇೞ್ದೊ (ಘ,ಚ,ಛ). ೭. (ಘ,ಚ,ಛ) ಗಳಲ್ಲಿಲ್ಲ.. ೮. + ಮದ (ಚ,ಛ). ೯. ಯಂ (ಘ,ಚ,ಛ). ೧೦. + ವ (ಚ). *ಮುಮಂ (ಘ,ಚ,ಛ). ೧೧. ಳುಮನೆನೆತೆನತಾನಾ (ಕ,ಗ), ಳುಮನೆನಿತನಾ (ಖ), ಳ್ಕೆ ನಿತನಿತನಾ (ಘ,ಛ), ಳ್ಕೆನಿತೆನಿತನಾ (ಚ). ೧೨. ರ್ದು(ಘ,ಚ,ಛ). ೧೩. ಗಳ್ಮ (ಘ,ಚ,ಛ). ೧೪. ರ್ಪನ್ನೆಗಂ (ಘ,ಚ,ಛ). ೧೫. ಯುಮಕಾಮ (ಘ,ಚ,ಛ). ೧೬. ಸವಿಳಾಚರ (ಘ,ಛ), ಸವಿಳಾಭರ (ಚ). ೧೭. ಕಟುಕಿಣಿ (ಘ,ಛ), ಕುಟಕಿಣಿ (ಚ). ೧೮. ಪ (ಘ,ಛ). ೧೯. + ಪಡೆ (ಚ). ೨೦. ಡಾ ಅರಸನುಂ ಕುಡಲೊಲ್ಲದಂ (ಕ,ಖ,ಗ). ೨೧. (ಕ,ಖ,ಗ) ಗಳಲ್ಲಿಲ್ಲ. ೨೨. ಬರುಮಂ (ಕ,ಖ,ಗ). ೨೩. ರ (ಖ). ೨೪. ಳಿಂದೊ (ಘ,ಛ). ೨೫. ಜ್ಯೆನೂಱು (ಖ).

ಮಾಡಿ ಎನಗೊಪ್ಪಿಸಲ್ವೇೞ್ಕುಮೆಂದು[೧] ಪೇೞ್ದೊಡವರುಮಂತೆಗೆಯ್ವೆಮೆಂದು
ರಥಂಗಳಂ ಮಾಡಲ್ ತಗುಳ್ದು ಅಱುದಿಂಗಳೊಳಾ ಅಯ್ನೂಱು ರಥಮಂ
ಸಮೆ[೨]ದು[೨] ವಿಶ್ವಮತಿಯರಸಂಗೆ ತಂದು ತೋಱಿದೊಡರಸಂ ಕಂಡಾದಮಾನು
ಮಾತಂಗೊಸೆದು ತುಷ್ಟಿದಾನ[೩]ಂಗೊ[೩]ಟ್ಟಂ ಮತ್ತೆ ವಿಶ್ವಕರ್ಮನಱುದಿಂಗ
[೪]ಳೊಳ್[೪] ರಥದೊಂ[೫]ದು[೫] ಗಾಲಿಯಂ ಸಮೆಯಿಸಿ ತಂದು ತೋಱಿದೊಡರಸಂ
ಕಂಡು ಮುಳಿ[೬]ದಾತನಂ[೬] ಕೊಲಲ್ ಬಗೆದೊ[೭]ಡಂಜಿ ಆತನುಮಾ[೭]ಗಾಲಿಯ
ನರಸನ ಮುಂದೆ ಮಣಿಕುಟ್ಟಿಮಮಪ್ಪ ಭೂಮಿಯೊ[೮]ಳೆತ್ತಿ[೮]ಕ್ಕಿ ಪ್ರಾಣಭಯದಿಂದೋಡಿ
ಗುರುದತ್ತ ನೃಪತಿಯಲ್ಲಿಗೆ ಪೋದೊನಾ ಗಾಲಿಯುಂ ಪದಿನಯ್ದು ದಿವಸಂ ಬರೆಗಂ
ತನಗೆ ತಾನೆ ಯಂತರಿಕ್ಷದೊಳ್ ನೆಲನಂ ಮುಟ್ಟದೆ ತಿಱ್ಱನೆ ತಿ[೯]ರಿಯು[೯]ತ್ತಿರ್ದುದಂ
ಕಂಡರಸಂ ವಿಶ್ವಕರ್ಮಂಗೊಸೆದಾತನಂ ಬೇಗಮಾರಯ್ದುಕೊಂಡು ಬನ್ನಿ
ಮೆಂ[೧೦]ದೊ[೧೦]ಡೆ ಕೆಲ[೧೧]ದವ[೧೧]ರಿಂದರಾತಂ ನಿಮಗಂಜಿಯೋಡಿಪೋಗಿ ಗುರು
ದತ್ತಂಗಾಳಾಗಿರ್ದೊನೆನೆ ಕೇಳ್ದರಸಂ ಗುರುದ[೧೨]ತ್ತನಲ್ಲಿ[೧೨]ಗೆ ತನ್ನ ಪೆರ್ಗ್ಗಡೆಗಳ
ನಿಂತೆಂದು ಕ[೧೩]ಲ್ಪಿ[೧೩]ಸಿಯಟ್ಟಿ[೧೪]ದೊಂ[೧೪] ಕಪ್ಪಂಬೆರಸೆಮ್ಮ ಬಡಗಿಯಂ ಬೇಗ
ಮಟ್ಟುಗೆಂದು ಪೋಗಿ ಪೇೞಿಮೆಂದೊಡವರುಂ ಪೋಗಿಯಾಮಾತಂ ಗುರುದತ್ತ
ನೃಪತಿಗೆ ತಮ್ಮರಸಂ ಕ[೧೫]ಲ್ಪಿಸಿದಂತೆ[೧೫] ನುಡಿದೊಡಾ ಮಾತಂ ಗುರುದತ್ತನೃಪತಿ
ಕೇಳ್ದಾದಮಾನುಂ ಮುಳಿದಿಂತೆಂದಂ ಮಂಡಳಮನಾಳ್ವರಸನಾಗಿಯುಂ ಪೆಱರ್ಗ್ಗೆ
ಕಪ್ಪಂಗು[೧೬]ಡು[ವೊ]ಡೀ[೧೬] ಸಿಂಹಾಸನಮುಂ ಬೆಳ್ಗೊಡೆಗಳುಂ [೧೭]ಚಾಮ[೧೭]ರಂ
ಗಳುಂ ಪಾಳಿ[೧೮]ಧ್ವಜಂ[೧೮]ಗಳುಂ ಪಂಚಮಹಾಶಬ್ದಂಗಳುಂ ಸೊರ್ಕ್ಕಾನೆಗಳುಂ
[೧೯]ಜಾತ್ಯಶ್ವಂಗಳುಮೆಂಬೀ ಬಲಂಗಳಿಂ ಕಜ್ಜಮೇನೆಂ[೧೯]ದು ನಿಮ್ಮರಸಂಗೆ ಪೇೞಿಂ
ತನ್ನ ಮಗಳಭಯಮತಿ ಕನ್ನೆವೆರಸು ತನ್ನ ಪಟ್ಟವರ್ಧನಮುಮಗ್ಗಳ ವಸ್ತು
ವಾಹನಂಗ[೨೦]ಳುಮಂ[೨೦] ಬೇಗಮಟ್ಟು[೨೧]ಗ[೨೧]ಟ್ಟದಾಗಳ್ ತನ್ನ ತಲೆವೆರಸು
ಕೊಳ್ವೆನೆಂದು ಪೇೞಿಮೆಂದವರ ಪೆರ್ಗ್ಗಡೆಗಳೊಳ್ ನುಡಿದು ನಿಮ್ಮ ಬೞಿಯನೆ
ಆನುಂ ಪಯಣಂ ಬಂದಪ್ಪೆನೆಂ[೨೨]ದು ನುಡಿದವರ್ಗ್ಗಳಂ[೨೨] ಪೋಗಲ್ವೇೞ್ದವರ
ಬೞಿಯನೆ ಪಿರಿದು ವಿಭೂತಿಯಿಂ ಚಾತು[೨೩]ರ್ವಲಂ[೨೩] ಬೆರಸು ಪೊಱಮಟ್ಟು
ಪಯಣಂಬೋಗಿ ಕತಿಪಯ ದಿವಸಂಗಳಿಂ ಚಂಪಾನಗರಮನೆಯ್ದಿ ಪೊೞಲಂ
ಮೂವಳಸು ವಳಸಿ ಮುತ್ತಿದಾಗಳ್

ಧಾತ್ರಿವಾಹನಂ ತನ್ನ ಸಮಸ್ತ [೨೪]ಸಾಧನಂ[೨೪] ಬೆರಸು ಪೊಱಮ[೨೫]ಟ್ಟೊ
ಡ್ಡ[೨೫]ಣಮನೊಡ್ಡೆ ಬಿಲ್ ಬಿಲ್ಲೊಳ್ ಕುದುರೆ ಕುದುರೆಯೊಳ್ ರಥಂ ರಥ

೧. + ಬೆಸನಂ (ಘ,ಚ,ಛ). ೨. ಯಿಸಿ (ಚ,ಛ). ೩. ನಮುಂ ಕೊ (ಘ,ಚ,ಛ). ೪. ಳಿ (ಘ,ಚ,ಛ). ೫. ದೆ (ಘ,ಚ,ಛ). ೬. ದು (ಘ,ಚ,ಛ). ೭. ಡಾತನಂಜಿಯಾ (ಘ,ಚ,ಛ). ೮. ಳಿ (ಘ,ಚ,ಛ). ೯. ರುಗ (ಛ). ೧೦. ದು ಪೇಳ್ದೊ (ಚ). ೧೧. ಬ (ಘ), ಂಬ (ಛ). ೧೨. ತ್ತಂ (ಘ,ಚ,ಛ). ೧೩. ಲಿ (ಚ,ಛ). ೧೪. ದಂ (ಚ,ಛ). ೧೫. ಲಿಸಿದದನೆ (ಘ,ಚ,ಛ). ೧೬. ಡುವಡೀ (ಕ,ಖ,ಗ), ಡದೆ (ಘ,ಚ,ಛ). ೧೭. ಚಾಮೆ (ಘ). ೧೮. ಕೇತನಧ್ವಜಂ (ಘ,ಛ), ಕೇತನಂ (ಚ). ೧೯. ರಥಂಗಳುಂ ಪದಾತಿಬಲವುಮೆಂಬ ಭೇದಂಗಳಿಂದೇಕಜ್ಜಮೆಂ (ಘ,ಚ,ಛ.) ೨೦. ಳ್ಮಂ (ಘ,ಚ). ೨೧. ವುದ (ಕ,ಖ,ಗ), ಮ (ಘ). ೨೨. ದವರಂ (ಘ,ಚ,ಛ). ೨೩. ರ್ದಂತಬಲಂ (ಘ,ಚ,ಛ). ೨೪. ಬಲಂ (ಘ,ಚ,ಛ). ೨೫. ಟ್ಟು ರ (ಕ,ಗ).

ದೊಳಣಿಯಣಿಯೊ[೧]ಳ್ ಘಟೆ[೧]ಯಾನೆ [೨]ಘಟೆ[೨]ಯಾನೆಯೊಳ್ [೩]ತಳ್ತು ತಾಗಿ[೩] ಪಲವು ದಿವಸಂ [೪]ಕಾದೆಯೊಂದು ದಿವಸಂ[೪] ಗುರುದತ್ತನೃಪತಿಯ ಪ್ರಧಾನನಪ್ಪ ಮಹಾ ಸಾಮಂತಂ [೫]ಮಹೇಂದ್ರ[೫]ದತ್ತನೆಂಬರಸನಾತನ ಮುಂಗೆಯ್ ಧಾತ್ರಿವಾಹನನ ಯೋಧನಿಂ ಚಕ್ರಪಾಣಿಯಿಂ ಖಂಡಿಸೆ ಪ[೬]ಟ್ಟುದಾ[೬]ಗಿ *ನೆಲದೊಳ್ ಬಿರ್ದುದಂ ಪರ್ದು ಕಂಡು ಕೊಂಡಾಕಾಶದೊಳ್ ಪಾಱಿಪೋಗುತ್ತಮಭಯಮತಿ ತನ್ನ* ಕನ್ಯಾ ಮಾಡದೆರಡನೆಯ ನೆಲೆಯ ಮುಂದಣ [೭]ಚವುಕಿಗೆ[೭]ಯ ಮೇಲೆ ದಾದಿಯುಂ ಸಖೀ ಜನಂಗಳ್ ಬೆರಸು ನಡಪಾಡುತ್ತಿ[೮]ರ್ದ[೮]ಳ ಮುಂದಾ ಕೆಯ್ಯಂ ಪ[೯]ರ್ದು ತಂದಿಕ್ಕಿದೊಡದು[೯] ವಜ್ರ ವೈಡೂರ್ಯ ಪದ್ಮರಾಗ ಪುಷ್ಯರಾಗ [೧೦]ಸಸ್ಯ[೧೦] ಕರ್ಕೇತನ ಇಂದ್ರನೀಲಂ ಮೊದಲಾಗೊಡೆಯ ಅನರ್ಘ್ಯಮಪ್ಪ ಮಾಣಿ[೧೧]ಕದಿಂ[೧೧] ಸಮೆದ [೧೨]ಪಲವುಂ[೧೨] ನಾನಾ ಪ್ರಕಾರದ ಕಂಕ[೧೩]ಣಂಗಳುಮಂ[೧೩] ತೊಟ್ಟ ಮುಂಗೆಯ್ಯುಂ ಬೆರಲ್ಗಳುಂ ಶಂಖ ಚಕ್ರ ಪದ್ಮಾಂಕುಶ ಚಾಮರ ತೋರಣ ಪತಾಕಾದಿ ಶುಭಲಕ್ಷಣಾಂಕಿತಮಾಗಿ ಕೆಂದಾವರೆಯ ಬಣ್ಣದಂತಪ್ಪ ತಳಮುಮಂ ಕಂಡೀ [೧೪]ತಳಮು[೧೪]ನೊಡೆಯಾತಂ ಸಾಮಾನ್ಯಪುರುಷನಲ್ಲಂ ಪಿರಿಯರಸನಾಗಲೆ ವೇೞ್ಕುಮೆಂದು ಮತ್ತೀ ಕೆಯ್ಯೇಕೆ ಖಂಡಿಸಿ ಬಿರ್ದುದಬ್ಬಾ ಎಂದು ದಾದಿಯಂ ಬೆಸಗೊಂಡೊಡಾಕೆಯಿಂತೆಂದಳ್ ಮಗಳೆ ನೀಂ ಕಾರಣಮಾಗಿ ಇಂತಪ್ಪವಯವಂಗಳನೊಡೆಯ ಅರಸುಗಳ್ ಪಲಂಬರುಂ ಸತ್ತಪರೆಂದೊಡಾಂ ಕಾರಣಮಾಗಿ ಏಕೆ ಸತ್ತಪರೆನಗದನಱಿಯೆ ಪೇೞಬ್ಬಾ ಎಂದೊಡಾ ದಾದಿಯಿಂತೆಂದು ಪೇೞ್ಗುಂ

ಕುರುಜಾಂಗಣಮೆಂಬುದು ನಾಡದರ್ಕೆ ತಿಲಕಮನೆ ಪೋಲ್ವುದು ಹಸ್ತಿನಾಪುರಮೆಂಬುದು ಪೊಱ[೧೫]ಲದಾ[೧೫]ದಮಾನುಂ ಸೇವ್ಯಮಪ್ಪುದದನಾಳ್ವೊಂ ಗುರುದತ್ತನೆಂಬೊನರಸನಾತನತ್ಯಂತ ರೂಪ ಲಾವಣ್ಯ ಸೌಭಾಗ್ಯ ಕಾಂತಿ ದೀಪ್ತಿ ಧೃತಿ ಕೀರ್ತಿ ಶೌರ್ಯ ವೀರ್ಯ ಬಳ ಪರಾಕ್ರಮನೊಡೆಯೊಂ ನವಯೌವನಂ ಸಾಕ್ಷಾತ್ ಕಾಮದೇವನೆ ಆದಮಾನುಂ ಪ್ರಚಂಡ ದೋರ್ದಂಡನುಂ ಬಲ[೧೬]ಗರ್ವಿ[೧೬]ತನುಂ ಪರಮಂಡಲಂಗಳಂ ಪಲವುಮನಿಱಿದೊಟ್ಟಯಿಸಿ ಕೊಂಡಾ[೧೭]ಳ್ದಪ್ರೊ[೧೭]ನಂತಪ್ಪಾತಂ ನಿನ್ನಂ ಬೇಡಿ ಪಾಗುಡಂಗಳಂ ಪೆರ್ಗಡೆಗಳುಮಂ ಪಲವು ಸೂೞಟ್ಟಿದೊಡಂ ನಿಮ್ಮಮ್ಮಂ ನಿನ್ನಂ ಕುಡಲೊಲ್ಲದಿರ್ದೊಡೆ ಮುನಿದಾತನ ತಲೆವೆರಸು ಕೂಸಂ ಕೊಳ್ವೆನೆಂದು ಗರ್ಜಿಸಿ ಪ್ರಳಯಕಾಲದ ಸಮುದ್ರಂ ಮೇರೆದಪ್ಪಿದಂತೆ ಚಾತುರ್ದಂತ ಬಲಂ ಬೆರಸು ಬಂದು ಪೊೞಲಂ ಮೂವಳಸಾಗಿ ಮುತ್ತಿದೊಡೆ [೧೮]ನಿ[೧೮]ಮ್ಮರಸಂ

---

೧. ಳಾ (ಘ,ಚ,ಛ). ೨. (ಘ,ಚ,ಛ) ಗಳಲ್ಲಿಲ್ಲ. ೩. ಘಟೆ ಘಟೆಯೊಳ್ ತಳ್ತದ್ಭುತಮಾಗಿ (ಘ,ಚ,ಛ). ೪. (ಕ,ಖ,ಗ)ಗಳಲ್ಲಿಲ್ಲ. ೫. ಮವುಂದ್ರ (ಕ), ಮಉಂದ್ರ (ಖ), ಮೌಂದ್ರ (ಗ). ೬. ಟ್ಟನಾ (ಕ,ಖ,ಗ). *–* (ಚ)ದಲ್ಲಿ ತ್ರುಟಿತ. ೭. ಚೌರಿಗೆ (ಖ), ಚವುಪಳಿಗೆ (ಘ,ಚ,ಛ). ೮. ರ್ಪ (ಘ,ಚ,ಛ). ೯. ದೀರ್ಡಾಡೆ (ಘ,ಚ,ಛ). ೧೦. (ಘ,ಛ) ಗಳಲ್ಲಿಲ್ಲ, (ಚ) ದಲ್ಲಿ ತ್ರುಟಿತ. ೧೧. ಕಂಗಳಿಂ (ಘ,ಚ,ಛ). ೧೨. (ಘ,ಚ,ಛ) ಗಳಲ್ಲಿಲ್ಲ. ೧೩. ಣಗಳ್ಮಂ (ಕ,ಗ), ಣ ಮುಂಗರಗಳ್ಮಂ (ಘ,ಚ,ಛ). ೧೪. ಕಯ್ಯ (ಘ,ಚ,ಛ). ೧೫. ಲಾ (ಘ,ಚ,ಛ). ೧೬. ದಕ್ಷಿ (ಕ,ಖ,ಗ). ೧೭. ಳ್ವ (ಘ), ಳ್ವೊ (ಚ,ಛ). ೧೮. ನ (ಚ).

ತನ್ನುಳ್ಳ ಬಲಂಬೆರಸು ಪೋಱಮಟ್ಟೊಡ್ಡಿ ನಿಂ[೧]ದನಿಂ[೧]ತೆರಡುಂ [೨]ಪಡೆಗಳಿಂದಿಂ ಗೇಱು[೨]ದಿವಸಂ ಕಾದಿದಪ್ಪುದು ಸಾಮಂತ ಮಹಾಸಾಮಂತರ್ ಮೊದಲಾಗಿ ಪಲಂಬ[೩]ರುಮರ[೩]ಸುಮಕ್ಕಳ್ [೪]ಸತ್ತರಾನೆ ಕುದುರೆ [೫]ಪದಾತಿ[೫] ಸತ್ತುದರ್ಕ್ಕೆ ಪ್ರ[೬]ಮಾಣಂ[೬] ಮೇರೆಯುಮಿಲ್ಲ ಮಹಾಘೋರತರಂ ಕಾಳೆಗ[೭]ಮಾಗಿರ್ಕ್ಕುಮೆಂದು[೭] ಪೇಟ್ಟೊಡದಂ ಕೇಳ್ದಂತಪ್ಪೊಡಬ್ಬಾ ನೀಮರಸನಲ್ಲಿಗೆ ಪೋಗಿ ಇಂತೆಂದು ನುಡಿಯಿಂ ನಿಮ್ಮ ಮಗಳಿಂತೆಂದು ಪೇ[೮]ಳ್ದಿಟ್ಟೆದೊ[೮]ಳಿನ್ನಂ ಗುರುದತ್ತಂಗೆ ಕುಡು[೯]ವೊಡ್ಡೆ[೯] ಕುಡು[೧೦]ಗೆಯು[೧೦]ಟಿದ* ಪುರುಷರ್ಕಳೆಲ್ಲಂ ಮೊಱೆಯಲ್ಲ[೧೧]ದವ[೧೧]ರೆನಗೆ ತ[೧೨]ಮ್ಮ[೧೨] ಮೆ[೧೩][ಚ್ಚ]ಲ್ಲದಾಗಳೀಗಳೆ[೧೩] ತಪಂಬಡುವೆನೆಂದಟ್ಟಿದೊಳೆಂದ ಭಯಮತಿ ಕ[೧೪]ಲ್ಪಿ[೧೪]ಸಿದ ಮಾತೆಲ್ಲಮನರಸಂಗೆ ದಾದಿ ಪೇಟ್ಟೊಡೆ ಅರಸನುಂ ಕೇಳ್ದು ತನ್ನ ಪ್ರಧಾನ[೧೫]ರಪ್ಪ ನಾಲ್ವರುಂ[೧೫] ಪೆರ್ಗ್ಗಡೆಗ[೧೬]ಳಂ ಕಳ್ಪಿಸಿ[೧೬] ಗುರುದತ್ತನಲ್ಲಿಗೆ ಕೂಸಂ ಕೊ[೧೭]ಟ್ಟೆನೆಂದ[೧೭]ಟ್ಟಿದೊಡಾತನುಂ ತನ್ನ ಬಲಮಂ ಕಾದಲೀಯದೆ ಬಾರಿಸಿದಂ ಧಾತ್ರಿವಾಹನನುಂ ತನ್ನ ಬಲಮಂ ಬಾರಿಸಿದನಿಂತೆರಡುಂ ಪಡೆಗಳ್ ಸಂಗ್ರಾಮಮನುಪಸಂಹರಿಸಿ ಸತ್ತ[೧೮]ವರ್ಗ್ಗ ನೊಂದ[೧೮]ವರ್ಗ್ಗ ತಕ್ಕ ವಿಧಿಯಂ ಮಾಡಿದ ಬೞಿಕ್ಕೆ ಕೆಲವು ದಿವಸದಿಂ ಪ್ರಶಸ್ತ ದಿವಸ ವಾರ ನಕ್ಷತ್ರ[೧೯]ದಿಂ ಹೋರಾ[೧೯] ಮುಹೂರ್ತದೊಳ್ ಕೂಸಿನನುಕೂಲದೊಳ್ ಮಹಾವಿಭೂತಿಯಿಂ ಪಾಣಿಗ್ರಹಣ ಪುರಸ್ಸರಮುಭಯಮತಿ ಕನ್ನೆಯಂ ಗುರುದತ್ತ ನೃಪತಿಗೆ ಕೊಟ್ಟು ಸನ್ಮಾನದಾನಾದಿಗಳಿಂದಾತನಂ ಪೂಜಿಸಿದನಾತನುಂ ಚಂಪಾನಗರದೊಳ್ ಪಲವು ದಿವಸಮಿ[೨೦]ರ್ದ್ದಿನ್ನೆಮ್ಮ[೨೦] ನಾ[೨೧]ಟ್ಕೆ[೨೧] ಪೋಪಮೆಂದರಸನಂ ಬೆಸಗೊಳಲಟ್ಟಿದೊಡರಸನುಂ ಕೂಸಿಂಗೆ ತಕ್ಕ ಪೆಂಡವಾಸದ ಪಲಂಬರುಮಗ್ಗಳದ ಸೂಳೆಯರ್ಕಳುಮಂ ಕರಿ ಕರಿಣಿ [೨೨]ತುರಗಾಶ್ವ ರಥ[೨೨] ಶಿಬಿಕಾದ್ಯನೇಕ ವಾಹನಂಗಳುಮಂ ಮುತ್ತಿನ ಮಾಣಿಕದ ಪೊನ್ನ ಮೂ[೨೩]ದೆ[೨೩]ಱದ [೨೪]ಪಲವುಂ[೨೪] ನಾನಾ [೨೫]ಪ್ರಕಾರ[೨೫]ದನರ್ಘ್ಯಮಪ್ಪ ತುಡುಗೆಗಳುಮಂ ಬೞಿವೞಿಗೊಟ್ಟರ್ವರುಮಂ ಪರಸಿಯುವರ ನಾ[೨೬]ಟ್ಕೆ[೨೬] ಕೞಿಪಿದಂ

ಮತ್ತೆ ಗುರುದತ್ತನೃಪತಿಯುಂ ಕತಿಪಯ ದಿವಸಂಗಳಿಂ ತನ್ನ ಪೊೞಲಂ ಹಸ್ತಿನಾಪುರಮನೆಯ್ದಿ[೨೭] ಮಹಾವಿಭೂತಿಯಿಂ ಪೊರ್ಕ್ಕಿರ್ದ[೨೭]ಷ್ಟವಿಷಯ ಕಾಮ ಭೋಗಂಗಳಂ ಪಲಕಾಲಮಭಯಮತಿಯೊ[೨೮]ಳ್ ಅನುನಯದಿಂದ[೨೮]ನುಭವಿಸುತ್ತಿರೆಯಾಕೆಗೆ

೧. ದಿಂ (ಕ,ಖ,ಗ). ೨. ಬಲಮುಮಿಂದಿಂಗಾಱು (ಘ,ಚ,ಛ). ೩. ರ (ಘ,ಚ,ಛ). ೪. + ವೆರಸು (ಘ,ಚ,ಛ). ೫. ಮಾನಸರ (ಖ,ಘ,ಚ,ಛ). ೬. ವಣುಂ (ಘ,ಚ,ಛ). ೭. ಮಾದುದೆಂದು (ಘ,ಚ), ದಂದಮಂ (ಛ). ೮. ಳ್ದೊ (ಘ,ಚ,ಛ). ೯. ವಡೆ (ಕ,ಖ,ಗ), ವೊಡಂ (ಘ,ಛ). ೧೦. ವುದು (ಕ,ಖ,ಗ), ಗೆ ಉ (ಚ). * + ಮಹಾ (ಘ,ಚ). ೧೧. (ಘ,ಚ,ಛ)ಗಳಲ್ಲಿಲ್ಲ. ೧೨. ನ್ನ (ಕ,ಖ,ಗ). ೧೩. ಯ್ಯೋಪಾದಿಯಾಗಳೀಗಡೆ (ಕ,ಖ,ಗ), ಯ್ಯಲ್ಲದಾಗಳೀಗಳೆ (ಘ,ಛ), ಯ್ಯ (ಯ್ಬ?) ಲ್ಲದೊರಳೀಗಳೆ (ಚ). ೧೪. ಲಿ (ಘ,ಚ,ಛ). ೧೫. ರುಮಂ (ಘ,ಚ,ಛ). ೧೬. ಳ್ಮಂ (ಘ), ಳುಮಂ (ಚ,ಛ). ೧೭. ಟ್ಟ (ಕ,ಖ,ಗ). ೧೮. ರ್ಗನೊಂದರ್ಗಮವರ್ಗ ಮವರ್ಗವರ್ಗೆ (ಘ), ವರ್ಗ ನೊಂದವರ್ಗಮವರ್ಗವರ್ಗೆ(ಚ). ೧೯. (ಘ,ಚ,ಛ)ಗಳಲ್ಲಿಲ್ಲ. ೨೦. ರ್ದ್ದಿನ್ನ (ಖ), ರ್ದು (ಘ,ಚ,ಛ). ೨೧. ಳ್ಗೆ (ಕ,ಗ), ಡ್ಗೆ (ಖ). ೨೨. ತುಂಗಾಶ್ವತತಿ (ಕ,ಖ,ಗ). ೨೩. ಱುತೆ (ಘ,ಚ,ಛ). ೨೪. (ಘ,ಚ,ಛ)ಗಳಲ್ಲಿಲ್ಲ. ೨೫. ತೆಱ (ಛ). ೨೬. ಳ್ಗೆ (ಕ,ಗ), ಡ್ಗೆ (ಖ). ೨೭. ಪೊರ್ಕ್ಕಿ (ಚ,ಛ). ೨೮. ಡನ (ಘ,ಚ,ಛ).

†ಸುವರ್ಣಭದ್ರ†ನೆಂಬೊಂ ಮಗಂ ಪುಟ್ಟಿದನಿಂತು [೧]ಸಂತೋಷದಿಂ[೧] ಕಾಲಂ ಸಲೆ ಮತ್ತೊಂದು ದಿವಸಂ ಹಸ್ತಿನಾಪುರದ ಸಾರೆ ಧರಣಿಭೂಷಣಮೆಂಬ ಪರ್ವತದೊಳ ಮೃತಾಸ್ರವರೆಂ[೨]ಬ ಗುರುಗಳುಂ ಆಯ್ನೂರ್ವರ್ ಋಷಿಯರಿ[೨]ರ್ದರೆಂಬುದಂ ಕೇಳ್ದು ಪುತ್ರ [೩]ಮಿತ್ರ[೩] ಕಳತ್ರ ಪರಿವಾರ ಸಮೇತಂ ವಂದನಾಭಕ್ತಿಗೆ ಪೋಗಿ ಗೆಂಟೆಱೊಳ್ ವಾಹನಂಗಳಿಂದಿೞಿದು ಬಲಗೊಂಡು ಬಂದರ್ಚಿಸಿ ಗುರುಭಕ್ತಿ ಗೆಯ್ದು ಭಟಾರರಂ ಬಂದಿಸಿಯುೞಿದ ಋಷಿಯರ್ಕಳುಮಂ ಗುರುಪರಿವಿಡಿಯಿಂದಂ ಬಂದಿಸಿ ಪಿರಿದುಬೇಗಂ ಧರ್ಮಮಂ ಕೇಳ್ದು ತದನಂತರಮಿಂತೆಂದು ಬೆಸಗೊಂಡಂ ಭಟಾರಾ ಎನ್ನ ಮುನ್ನಿನ ಭವಂಗ*ಳೆ*ನಗೞಿಯೆ ಬೆಸಸಿಮೆನೆ ಭಟಾರರಿಂತೆಂದು ಪೇೞ್ದಿರೀ[೪] ಭವದಿಂ ತೊಟ್ಟು ನಾಲ್ಕನೆಯ ಭವದಂದು ನೀಂ ಸಾವಸ್ತಿಯೆಂಬ ಪೊೞಲೊಳ್ ಉಪರಿಚರನೆಂಬ ಮಂಡಳಿಕ[೫]ನಯ್[೫] [೬]ಜಳಕ್ರೀಡೆಯನಾಡುತ್ತಿ[೭]ರ್ಪನ್ನೆಗಂ[೭] ವಜ್ರದಾಡನೆಂಬ ವಿದ್ಯಾಧ[೮]ರನಿಂ ಕೊಲೆಪಟ್ಟೆಯಾಗಿ[೮] ಸತ್ತಾ ಪೊೞಲೊಳ್ ಪೆರ್ವಾವಾಗಿ ಪುಟ್ಟಿದೆಯಲ್ಲಿಂದಂ ಸತ್ತು[೯] ಭವನವಾಸಿಗ ಲೋಕದೊಳ್ ಧರಣೇಂದ್ರನಾಗಿ ಪುಟ್ಟಿದೆಯಲ್ಲಿಂ ಬಂದೀಗಳ್ ಗುರುದತ್ತನೆಯಾದೆಯೆಂದು ಆತನ ನಾಲ್ಕು ಭವಂಗಳಂ ಸವಿಸ್ತರಂ ಭಟಾರರ್ ಪೇ[೧೦]ೞೆ ಕೇಳ್ದಾ[೧೦]ದಮಾನುಂ ವೈರಾಗ್ಯಮನೊಡೆ[೧೧]ಯೊನಾದೊಂ[೧೧]

ಮತ್ತಭಯಮತಿಯುಂ ಎನ್ನ ಭವಮುಮಂ ಭಟಾರಾ ಎನಗೆ ಬೆಸಸಿಮೆಂದು ಬೆಸಗೊಂಡೊಡೆ ಭಟಾರರಿಂತೆಂದು ಪೇೞ್ದರ್ ಚಂಪಾನಗರದೊಳೊರ್ವಂ [೧೨]ಪೋಡುಂ[೧೨]ಗಾಱಿಂ ಗರುಡವೇಗನೆಂಬೊನಾತಂಗೆ ನೀಂ ಮುನ್ನಿನ ಭವದೊಳ್ ಪೆಂಡತಿಯಯ್ [೧೩]ಗೋಮತಿಯೆಂಬೆ[೧೩]ಯೊಂದು ದಿವಸಂ ಸಮಾಧಿಗುಪ್ತರೆಂಬ ಭಟಾರರ್ ಪಲಂಬರ್ ರಿಸಿಯರ್ವೆರಸು ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಚಂಪಾನಗರಕ್ಕೆ ವಂದೊಡವರ ಪಕ್ಕದೆ ನೀಂ ಪೋಗಿ ಧರ್ಮಮಂ ಕೇಳ್ದು ಕೊಲ್ಲದ [೧೪]ಕಳ್ಳದ[೧೪] ಮಧು ಮದ್ಯ ಮಾಂಸಂಗ[೧೫]ಳುಮ[೧೫]ಯ್ದು ಪಾಲ್ಮರ[೧೬]ನ ಪಣ್ಣುಂ[೧೬] ಗಿಣ್ಣುಮಾ[೧೭]ಳಂಬೆ[೧೭]ಯುಂ ಇಂತಿವೆಲ್ಲಮಂ ತಿನ್ನದ ಬ್ರತಂಗ[೧೮]ಳುಮಂ[೧೮] ಕೈಕೊಂಡು ಭಟಾರರಂ ವಂದಿಸಿ ಮನೆಗೆ ಪೋ[೧೯]ಗೆ[೧೯]ಯನ್ನೆಗಂ ನಿನ್ನ ಭರ್ತಾರಂ ಬೇಂಟೆ[೨೦]ಯಾಡಿ[೨೦] ಪಲವುಂ ಲಾವುಗೆ[೨೧]ಯುಂ[೨೧] [೨೨]ಕೆ ಕೊರಸುಂ[೨೨] ಮೊದಲಾಗೊಡೆಯ ಪಕ್ಷಿಜಾತಿಗಳಂ

---

† ಶ್ರೀದತ್ತ (?) ೧. (ಛ) ದಲ್ಲಿಲ್ಲ. ೨. ಬಾಚಾರ್ಯರೇಳ್ನೂಱು ರುಷಿ ಸಮುದಾಯಂಬೆರಸಿ (ಘ,ಚ,ಛ). ೩. (ಘ,ಚ,ಛ)ಗಳಲ್ಲಿಲ್ಲ. *ಳನೆ (ಘ,ಚ,ಛ). ೪. + ಭರತಕ್ಷೇತ್ರದೊಳೀ (ಛ). ೫. ನಾಗಿ (ಘ,ಚ,ಛ). ೬. + ಆತಂ (ಕ,ಗ). ೭. ಪೊರ್ನಂ (ಘ,ಚ,ಛ). ೮. ರಂ ನಿನ್ನಂ ಕೊಲೆ ನೀಂ (ಕ,ಗ), ರಂ ಕೊಲೆ ನೀಂ (ಘ,ಚ,ಛ). ೯. + ಪೋಗಿ (ಘ,ಚ,ಛ). ೧೦. ಳ್ದೊಡಾ (ಘ,ಚ,ಛ). ೧೧. ಯನಾದಂ (ಘ,ಚ,ಛ). ೧೨. ಪುಳುಂ(ಕ,ಖ,ಗ). ೧೩. (ಘ,ಚ,ಛ) ಗಳಲ್ಲಿಲ್ಲ. ೧೪. ಕಳದ (ಕ,ಗ). (ಘ,ಛ) ಗಳಲ್ಲಿಲ್ಲ, (ಚ) ದಲ್ಲಿ ತ್ರುಟಿತ. ೧೫. ಳ ನುಣ್ಣದ (ಘ,ಛ), (ಚ)ದಲ್ಲಿ ತ್ರುಟಿತ. ೧೬. ದ ಪಣ್ಣುಮಂ (ಘ,ಛ). (ಚ) ದಲ್ಲಿ ತ್ರುಟಿತ. ೧೭. ಣಂಬಿ (ಖ). ೧೮. ಳ್ಕಂ (ಕ,ಗ), ಳಂ(ಘ,ಚ). ೧೯. ದೆ (ಘ,ಚ,ಛ). ೨೦. ವೋಗಿ (ಘ), ಯೋಗಿ (ಛ), (ಚ)ದಲ್ಲಿ ತ್ರುಟಿತ. ೨೧. ಉಂ (ಕ), ವುಂ (ಗ). ೨೨. ಕಕ್ಕರವಕ್ಕಿ (ಘ,ಚ), ಕರ್ಕರವಕ್ಕಿ(ಛ).

ಬಲೆಯನೊಡ್ಡಿ [೧]ಪಿಡಿದು ಕಟ್ಟ[೧] ಬಾಟಿವಾಟಿ ಮನೆಯೊಳ್ ತಂದಿಟ್ಟು ಮತ್ತೆ ಬೇಂಟೆಗೆ ವೋದನನ್ನೆಗಂ ನೀನವಂ [೨]ಕಂಡು[೨] ಕಾರುಣ್ಯ[೩]ಭಾವದಿಂ[೩]ದನಿತುಮಂ ಬಿಟ್ಟು ಕಳೆ[೪]ದೊಡವು ಪಾಱಿಪೋದವು[೪] ಮತ್ತೆ [೫]ನಿನ್ನ ಭರ್ತಾರಂ[೫] ಬಂದು ಪಕ್ಕಿಗಳಂ ಕಾಣದೆ[೬] ಬಿಟ್ಟು ಕಳೆದರಾರೆಂದು ಬೆಸಗೊಂಡೊಡಾಂ ಬಿಟ್ಟು ಕಳೆದೆನೆಂದೊಡೆ ಇಂತಪ್ಪ ಧ[೭]ರ್ಮಾರ್ಥಿ[೭]ಯೆನ್ನ ಮನೆಯೊಳಿರಲ್ವೇಡೆಂದು ಬಯ್ದು ಪೊಯ್ದಟ್ಟಿ ಕಳೆದೊಂ ನೀನುಂ [೮]ಮನೆಯಿಂದಂ[೮] ಪೊಱಮಟ್ಟು ಪೋಗಿ ನಂಟರ ಮನೆಯೊಳಿರ್ದೆಯನ್ನೆಗಮೊಂದು ದಿವ[೯]ಸಮಾ[೯] ಚಂಪಾಪುರಮನಾಳ್ವೊಂ ಧಾತ್ರಿವಾಹನನೆಂಬೊನರಸನುಮಾತನ ಮಹಾದೇವಿ ಶ್ರೀಮತಿಯುಮಂತಿರ್ವರುಂ ಮಹಾವಿಭೂತಿಯಿಂ [೧೦]ಪೊಱಲಂ ಪೊಱಮಟ್ಟವರ[೧೦] ಶ್ರೀಯುಂ ವಿಭೂತಿಯುಮಂ ಕಂಡಿವರ್ಗಾಂ ಪುಟ್ಟಿದೊಡೊಳ್ಳಿತ್ತೆಂದು ಮನದೊಳ್ ಬಗೆದಿರ್ದು ಕೆಲವು ದಿವಸದಿಂ ಸತ್ತು ಶ್ರೀಮತಿಯ ಗರ್ಭದೊಳ್ ನೆಲಸಿ[೧೧]ರೆ ಯಾಕೆಗೆ[೧೧]ಲ್ಲಾ ಜೀವಂಗಳಂ ದಯೆಗೆ[೧೨]ಯ್ವ ಬಯಕೆಯಾದು[೧೨]ದನರಸಂ ಕೇಳ್ದು ತನ್ನ ಪೊಱಲೊಳಂ ನಾಡೊಳಮಾರಪ್ಪೊಡಂ [೧೩]ಜೀವಂ[೧೩]ಗಳಂ ಕೊಲ್ಲದಂತು ಗೋಸನೆಗ[೧೪]ಳೆ[೧೪]ಯಿಸಿದನದು ಕಾರಣದಿಂ ನಿನಗಭಯಮತಿಯೆಂದಾ ತಾಯುಂ ತಂದೆಯುಂ ಪೆಸರನಿ[೧೫]ಟ್ಟು ಬಾಳ್ದಿ[೧೫]ರ್ ಎಂದಿರ್ವರ ಭವಂಗಳುಮಂ ಭಟಾರರ್ ಪೇೞ್ದೊಡರಸನುಮರಸಿಯುಂ ಕೇಳ್ದು ಸಂಸಾರ ಶರೀರ [೧೬]ಭೋಗ[೧೬] ವೈರಾಗ್ಯಮನೊಡೆಯರಾಗಿ ಶ್ರೀದತ್ತನೆಂಬ ಪಿರಿಯ ಮಗಂಗೆ ರಾಜ್ಯಪಟ್ಟಂಗಟ್ಟಿ ಪಲಂಬರರಸುಮಕ್ಕಳ್ವೆರಸಮೃತಾಸ್ರವ ಭಟಾರರ ಪಕ್ಕದೆ ಗುರುದತ್ತ ಮಹಾರಾಜಂ ತಪಂಬಟ್ಟನಭಯಮತಿಯುಮಾ ಭಟಾರರೆ ಗುರುಗಳಾಗೆ [೧೭]ಸುವ್ರತೆಯೆಂಬ ಕಂತಿಯರೆ ಕಂತಿಯರಾಗೆ[೧೭] ತಪಂಬಟ್ಟು ಸಮ್ಯಕ್ತ್ವಪೂರ್ವಕಂ ಮಹಾವ್ರತಂಗಳಂ ಕೈಕೊಂಡಾಚಾರಮಾರಾಧನೆ ಮೊದಲಾಗೊಡೆಯ ಚರಣಗ್ರಂಥಂಗಳಂ ಕಲ್ತು ಪಲಕಾಲಮುಗ್ರೋಗ್ರ ತಪಶ್ಚರಣಂಗೆಯ್ದು ನೋಂಪಿಗಳಿಂದಂ ಗಿಡಿಗಿಡಿಜಂತ್ರಂ ಮಿಳಿಮಿಳಿನೇತ್ರಮಾಗಿ ತಮ್ಮ ಮೆಯ್ಯಂ ತವಿಸಿ ಪಶ್ಚಾತ್ಕಾಲದೊಳ್ ಸಂನ್ಯಸನಂಗೆಯ್ದು[೧೮] ಸಮಾಧಿಮರಣದಿಂ ಮುಡಿಪಿ ಕಾಪಿ[೧೯]ಷ್ಠ[೧೯]ಮೆಂಬೆಂಟನೆಯ ಸ್ವರ್ಗದೊಳ್ ಸ್ವಯಂಪ್ರಭಮೆಂಬ ವಿಮಾನದೊಳ್ ಪದಿನಾ[೨೦]ಲ್ಕು[೨೦] ಸಾಗರೋಪಮಾಯುಷ್ಯಮನೊಡೆಯನಮಿತಕಾಂತನೆಂಬೊಂ ದೇವನಾಗಿ ಪುಟ್ಟಿದೊಳಿತ್ತ ಗುರುದತ್ತ ಭಟಾರರುಂ ಪನ್ನೆರಡು ವರುಷಂಬರೆಗಂ ಗುರುಗಳನಗಲದಿರ್ದು ದ್ವಾದಶಾಂಗ ಚತುರ್ದಶಪೂರ್ವಮಪ್ಪಾಗಮಮೆಲ್ಲಮಂ ಕಲ್ತು ಗುರುಗಳಂ ಬೆಸಗೊಂಡವರನುಮತದಿಂದೇಕವಿಹಾರಿಯಾಗಿ ಘೋರವೀರ ತಪಶ್ಚರಣಂ ಗೆಯ್ಯುತ್ತಂ [೨೧]ಗ್ರಾಮೇಕರಾತ್ರಂ ನಗರೇ ಪಂಚರಾತ್ರಂ ಅಟವ್ಯಾಂ ದಶರಾತ್ರಮೆಂಬೀ ನ್ಯಾಯದಿಂ[೨೧] ಗ್ರಾಮ

---

೧. (ಘ,ಚ,ಛ)ಗಳಲ್ಲಿಲ್ಲ. ೨. ಕೊಲ್ಲದೆ (ಘ,ಚ,ಛ). ೩. ಬುದ್ಧಿಯಿಂ (ಘ,ಚ,ಛ). ೪. ವುದುಂ (ಘ,ಚ,ಛ). ೫. (ಘ,ಚ,ಛ) ಗಳಲ್ಲಿಲ್ಲ. ೬. + ಪಕ್ಕಿಗಳಂ (ಕ,ಗ). ೭. ರ್ಮವರ್ತಿ (ಛ). ೮. (ಘ,ಚ,ಛ) ಗಳಲ್ಲಿಲ್ಲ. ೯. ಸಂ ಆ (ಕ,ಗ), ಸಮುಲ್ಬರೆ ವಾರ್ತಾ (ಖ). ೧೦. ದೋಲಗಂಗೊಟ್ಟಿರ್ದೊಡವರ (ಘ,ಚ,ಛ). ೧೧. ಯಾಕೆಗೆ ನೀಂ ಗರ್ಭದೊಳಿರೆ ಬಯಕೆಯೆ (ಕ,ಖ,ಗ). ೧೨. ಯ್ವಂತಿರೆಯು (ಕ,ಖ,ಗ). ೧೩. ಜನಂ (ಕ,ಖ,ಗ). ೧೪. ಳಂ ಪೊ (ಛ). ೧೫. ಟ್ಟ (ಖ,ಘ,ಚ,ಛ). ೧೬. ಕ್ಕೆ ಪೇಸಿ (ಘ,ಚ,ಛ). ೧೭. ಸೂವ್ರತಗಂತಿಯರಾಗೆ (ಛ). ೧೮. + ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ (ಘ,ಚ,ಛ). ೧೯. ಷ್ಠ (ಘ,ಚ,ಛ). ೨೦. ಱು (ಘ,ಚ,ಛ). ೨೧. (ಛ)ದಲ್ಲಿಲ್ಲ.

ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕ್ರಮದಿಂ ಸುರಾಷ್ಟ್ರ[೧]ಮನೆಯ್ದಿ[೨]ಯಲ್ಲಿ[೨] ದ್ರೋಣಿಮಂತಮೆಂಬ ಪರ್ವತದ ಸಾರೆ ಹಳಮುಖನೆಂಬ ಪಾರ್ವನಿರ್ಪ ಪಲ್ಲಿಖೇಡಮೆಂಬೂರನೆ[೩]ಯ್ದುವನ್ನೆಗಮೆ[೩]ಡೆಯೊಳ್ ನೇಸಪ್ಪುರ್ಟ್ಟೊಡೆ ಯತ್ರಾಸ್ತಮಿತವಾಸಿಗಳಿಲ್ಲಿ ನೇಸಪ್ಪುರ್ಟ್ಟತ್ತಲ್ಲಿಯೆ [೪]ನಿಲ್ವ[೪]ರಪ್ಪುದಱಿಂ[೫]ದೂರ ಪೊಱವೊೞ[ಲ] ಪೊಲದೊಳ್[೫] ಬಟ್ಟೆ[೬]ಯ ಕ[೬]ಣ್ಣೊಳ್ ರಾತ್ರಿಪ್ರತಿಮೆನಿಂದೊರನ್ನೆಗಮಿರುಳ್ ನಾಲ್ಕು ಜಾವಮುಂ ಭೋರೆಂದು ಪೆರ್ಮೞೆ ಕೊಂಡು ಕೆಸಱಾದೊಡೆ ನೇಸಮ್ಮೂರ್ಡಿದೊಡಪ್ರಾಸುಕಂ ಬಟ್ಟೆಯೆಂದು ಕೈಯನೆತ್ತಿ ಕೊಳ್ಳದೆ ಮತ್ತಂತೆ ಸೂರ್ಯಪ್ರತಿಮೆನಿಂದೊರನ್ನೆಗಂ

ಹಳಮುಖನೆಂಬ ಪಾರ್ವಂ ತನ್ನ ಮೂಡಣ ಕೆಯ್ಯನುೞಲೆಂದು ಪೋಗಿ ಕೆಸಱಾದುದಂ ಕಂಡುೞಲ್ ಪದನಲ್ತೆಂದು ಬಿಟ್ಟದ [೭]ಪಡುವಣ[೭] ಕೆಯ್ಯನುೞಲ್ ಪೋಗುತ್ತಂ ತನ್ನ ಕೆಯ್ಯ ಸಾರೆ ಸೂರ್ಯಪ್ರತಿಮೆನಿಂ[೮]ದ ಭಟಾರ[೮]ರಂ ಕಂಡಿಂತೆಂದನಜ್ಜಾ ಎನ್ನ ಪೆಂಡತಿ ಕೂೞನಿಲ್ಲಿಗೆ ಕೊಂಡು ಬಂದೊಡೆ ಪಡುವಣ ಕೆಯ್ಗೆ ವೋದನೆಂದು ಪೇೞ್ದಿಟ್ಟಂ ಗಡಿಮೆಂದು ಪಡುವಣ ಕೆಯ್ಗೆ ವೋದನನ್ನೆಗಮಾತನ್ ಪಾರ್ವಂತಿಯುಂ ಪಗಲಪ್ಪಾಗಳ್ ಕೂೞಂ ಕೊಂಡು ಬಂದು ಕೆಯ್ಯೊಳ[೧೦]ಗಲಮು[೧೦]ಱಿಸಿ ಕಾಣದೆ ಸೂರ್ಯಪ್ರತಿಮೆನಿಂದ ಭಟಾರರಂ ಬೆಸಗೊಂಡಳಜ್ಜಾ ಎನ್ನ ಭಟ್ಟನೀ ಕೆಯ್ಯನುೞ[೧೧]ಲ್ ಬಂದಾ[೧೧]ತನೆತ್ತ ವೋದಂ ಪೇೞಿಮೆಂದು ಬೆಸಗೊಂಡೊಡಾ ಭಟಾರರ್ ಮೌನವ್ರತಂಗೊಂಡು ನುಡಿಯದೆ ಕೆಮ್ಮಗಿರ್ದೊಡೆ ಪಿರಿದುಂ ಬೇಗಮಿರ್ದು ಬೇಸತ್ತು ಕೂೞಂ ಮನೆಗೆ ಕೊಂಡುಪೋದಳನ್ನೆಗಮಿತ್ತ ಹಳಮುಖನುಂ ಕೆಯ್ಯಂ ಪಿರಿದು ಬೇಗಮುೞ್ತು [೧೨]ಸೇದೆ[೧೨]ಗೆಟ್ಟು ಪಸಿದು ನೀರಡಿಸಿ ಬಸಮೞಿದು ಕೂೞಂ ತರ್ಪುದಂ ಪಿರಿದುಂ ಬೇಗಂ ಪಾರುತ್ತಿರ್ದು ತಾರದಿರ್ದೊಡೆ ಬೇಸತ್ತು ಮುಳಿದು ಮನೆಗೆ ವೋಗಿ ಎಲೆಗೆ ಕೂ[೧೩]ೞಂ[೧೩] ತಂದೆಯಿಲ್ಲೆಂದು ಪೆಂಡತಿಯಂ ಸೊಪ್ಪುನಾರಾಗಿ ಬಡಿಯೆ ಆಕೆಯಿಂತೆಂದಳೇಕೆ ಬಡಿವೆಯಾಂ ಕೂೞಂ ಕೊಂಡುಪೋಗಿ ಕೆಯ್ಯೊಳಱಿಸಿ ಪಿರಿದುಬೇಗಮಿರ್ದು ಪಾರ್ದು ನಿಮ್ಮಂ ಕಾಣದೆ ಮನೆಗೆ ಕೂೞಂ ತಂದೆನೆಂದೊಡೇಕಲ್ಲಿರ್ದ ಕ್ಷಪಣಕನಂ ಬೆಸಗೊಂಡೆಯಿಲ್ಲಾತಂಗಾಂ [೧೪]ಮೂಡಣ ಕೆಯ್ಗೆ ನೀಂ ಬಂದೊಡೆ[೧೪] ಪಡುವಣ ಕೆಯ್ಗೆ[೧೫] ಕೂೞಂ ಕೊಂಡು[೧೫]ಬರ್ಪಂತಿರೆ ಪೇೞ್ದು ಪೋದೆನೆಂದೊಡಾಕೆಯಿಂತೆಂದಳೆನಿತಾನುಂ ಸೂ[೧೬]ೞಾಂ[೧೬]ಬೆಸಗೊಂಡೊಡಂ ಪೇೞ್ದನಿಲ್ಲೆಂದೊಡಂತಪ್ಪೊಡೆ ನಿನಗೇನುಂ ದೋಷಮಿಲ್ಲೆನ್ನನಾತನುಣ್ಣ ಪಡಿಸಿ ಕೊಂದನೆಂದು ಪೆಂಡತಿಯ [೧೭]ಮೇಗಣ[೧೭] ಮುಳಿಸನುೞಿದು [೧೮]ಋಷಿಯರ ಮೇಗೆ ಮುನಿಸಾಗಿ[೧೮] ಭವಸಂಬಂಧಿಯಪ್ಪ ವೈರಂ ಕಾರಣಮಾಗಿ ಕ್ರೋಧಾಗ್ನಿ ಪೆರ್ಚಿಯೆನ್ನಂ

೧. + ವಿಷಯ (ಘ,ಚ,ಛ). ೨. (ಘ,ಚ,ಛ)ಗಳಲ್ಲಿಲ್ಲ. ೩. ಯ್ದುವರೆ ಎ (ಘ,ಚ,ಛ). ೪. ಇರ್ಪ (ಕ,ಖ,ಗ). ೫. ದೂರೆ ಪೊಲದೊಳ್ (ಕ,ಖ,ಗ), ದೂರ ಪೊಱವೊಳಲೊಳ್ (ಘ,ಚ), ಊರ ಪೊಱವೊಳಲೊಳ್ (ಛ). ೬. ಗ (ಘ,ಚ,ಛ). ೭. ಪಕ್ಕಣ (ಘ,ಛ), ಪಕ್ಕಣದ ಸಾರೆ (ಚ). ೮. ದೊ (ಘ,ಚ), ದ (ಛ). ೯. + ಪೆಂಡತಿಯುಪ್ಪ(ಘ,ಚ,ಛ). ೧೦. (ಘ,ಚ,ಛ)ಗಳಲ್ಲಿಲ್ಲ. ೧೧. ಲೆಂದು ಬಂದನಾ (ಘ,ಛ), ಲೆಂದು ಬಂದಾ(ಚ). ೧೨. ದೆಸೆ (ಕ). ೧೩. ಳನೇಕೆ(ಘ,ಚ,ಛ). ೧೪. (ಘ,ಚ,ಛ) ಗಳಲ್ಲಿಲ್ಲ. ೧೫. ನಿನ್ನಂ ಕೂಳ್ಗೊಂಡು (ಘ,ಚ,ಛ). ೧೬. ಳಂ (ಕ,ಖ,ಗ). ೧೭. (ಘ,ಚ,ಛ) ಗಳಲ್ಲಿಲ್ಲ. ೧೮. (ಚ)ದಲ್ಲಿಲ್ಲ; . . . ಮುಳಿದು (ಘ,ಛ).

ಪಸಿವಿನಿಂ ಸುಟ್ಟೊನಂ [೧]ಕಿಚ್ಚಿನಿಂ[೧] ಸುಟ್ಟಲ್ಲದುಣ್ಣೆನೆಂದು ಪ್ರತಿಜ್ಞೆಗೆಯ್ದು [೨]ಪುಲ್ಲಬೆಂ[೨]ಟೆಯಂ [೩]ಪೊಸೆದು[೩] ಕಿಚ್ಚುಮೆಣ್ಣೆ[೪]ಯ ಕೊಡನುಂ ಬೆಂಟೆ[೪]ಯುಮಂ ಕೊಂಡು ಪೋಗಿ ಭಟಾರರ ಮುಂದಿಟ್ಟಿಲವೊ ಸವಣಾ ನೀನೆನ್ನಂ ಪಸಿವಿನಿಂದಂ ಸುಟ್ಟೆಯಂತೆ ಯಾನುಂ ನಿನ್ನಂ ಕಿ[೫]ಚ್ಚಿನಿಂದಂ[೫] ಸುಟ್ಟಪ್ಪೆಂ ಕಾ[೬]ವೋ[೬]ರಾರೆಂದು [೭]ಮುಟ್ಟಿ[೭] ಮೂದಲಿಸಿದಾಗಳ್ ಭಟಾರ[೮]ರಿಂ[೮]ತೆಂದು ಬಗೆದರೀತಂಗೇನುಂ ದೋಷಮಿಲ್ಲೆಮ್ಮ ಮುನ್ನಿನ ಗೆಯ್ದ ಕರ್ಮದುದಯಕಾ[೯]ಲಂ ಬಂ[೯]ದುದಕ್ಕುಮದೆಮ್ಮಂ ಸುಟ್ಟಪ್ಪುದೀತನೆಮ್ಮಂ ಸುಟ್ಟಪ್ಪೊನಲ್ಲಂ *ಸುಡುವೊಡಂ ಕಿಡುವೊಡ[೧೦]ಲಸೆ* ಸು[೧೦]ಡುಗುಮೆಮ್ಮ [೧೧]ದರ್ಶನ ಜ್ಞಾನ ಚಾರಿತ್ರಂಗಳಂ ಸುಡ[೧೨]ಲ್ಲೆ[೧೨]ಱಿಯನೀತನೆಮಗೆ ಕಲ್ಯಾಣಮಿತ್ರನೆಂದು ಬಗೆದಿಂತೆಂದು ಭಾವಿಸಲ್ ತಗುಳ್ದರ್

**ಗಾಹೆ** ॥ ಣಿಂದಂತಂ ಸಿಳಹಂತಂ ಸತ್ತುಂ ಮಿತ್ತುಂ ತಹೇವ ಸುಹದುಕ್ಖಂ
ಜೋ ಸಮಭಾವಣ ಪೆಚ್ಛಇ ಸೋ ಸವಣೋ ಸೋಯು ಪವ್ವಯಿಒ ॥

ದುಜ್ಜಣವಯಣಸಡಗರಂ ಸಹಂತಿ ಉಚ್ಛೋಡಣಂ ಚ ಪಹರಂ ಚ
ಣ ಯ ಕುಪ್ಪಂತಿ ಮಹಾರಿಸಿಸಮಣಗುಣವಿಜಾಣಗಾ ಸಮಣಾ ॥

+ತಿಣ್ಣೆವ ಚಿಣ್ಣೆವಖ್ಖಯಿ ಇದೇವ ಅಗಿದೇವ ಉದಯಗ್ಗಿಸಿ ದುಣ್ಣಾರೋಗಾ
ಬಿಘಾದೆ ಇಮಂ ಸರೀರ ವಿಣಪ್ಪದಿ ಅಣಚ್ಚಂ ತಿಣ್ಣಂಚೋ ಸುಸದಭಾವೇಣ
ಝಾಣೇಣ ಉತ್ತಾ ॥ +(?)

ಜೀವಿದಮರಣೇ ಲಾಭಾಲಾಭೇ ಸಂಜೋಗವಿಪ್ಪಜೋಗೇ ಯ ।
ಬಪ್ಪಂ (?) ಸುಹದುಕ್ಖಾದಿಸು ಸಮದಾ ಸಾಮಾಯಿಗಂ ಣಾಮ ॥

ಖಮ್ಮಾಮಿ ಸವ್ವ ಜೀವಾಣಂ ಸವ್ವೇ ಜೀವಾ ಖಮಂತು ಮೇ
ಮೆತ್ತೀ ಮೇ ಸವ್ವ ಭೂದೇಸು ವೇರಂ ಮಜ್ಝ ಣ ಕೇಣ ಚಿ ॥

ಎಂದಿಂತು ಕ್ಷಮೆಯಂ ಭಾವಿಸುತ್ತಿರ್ಪನ್ನೆಗಂ ಹಳಮುಖನುಂ [೧೩]ಬೆಂಟೆ[೧೩]ಯನೆಣ್ಣೆಯೊಳ್ [೧೪]ತೊಯ್ದು[೧೪] ನಖಾಗ್ರದಿಂ ತೊಟ್ಟು ನೆತ್ತಿವರೆಗಂ ಬಳಸಿಯುಂ ಮೆಯ್ಯಂ ಸುತ್ತಿ ಎಲ್ಲಾ ಎಡೆಗಳೊಳಂ ಕಿಚ್ಚಂ ತಗುಳ್ಚಿಯೆಣ್ಣೆಯಂ ತಳಿಯು[೧೫]ತ್ತಿರಲು[೧೫]ರಿಕೊಂಡೇಕಜ್ವಾಲೆಯಾಗಿ ಸುಡೆ[೧೬]ಯಾ ಕಿಚ್ಚು ಮೆಯ್ಯಂ ಪೊ[೧೭]ರ್ದೆಯ[೧೭]ನ್ನೆಗಂ ಭಟಾರರಾಜ್ಞಾವಿಚಯಮಪಾಕವಿಚಯ ವಿಪಾಕವಿಚಯ ಸಂಸ್ಥಾನವಿಚಯಮೆಂಬೀ ನಾ[೧೮]ಲ್ಕು[೧೮] ಧರ್ಮಧ್ಯಾನಂಗಳಂ[೧೯] ಧ್ಯಾನಿಸುತ್ತಂ ಬೞಿಕ್ಕೆ ಪೃಥಕ್ತ್ವ ವಿತರ್ಕ ವೀಚಾರಮೆಂಬ ಪ್ರಥಮಶುಕ್ಲಧ್ಯಾನಮಂ ಧ್ಯಾನಿಸಿ [೨೦]ಸೂಕ್ಷ್ಮಸಾಂಪರಾಯಗುಣಸ್ಥಾನದೊಳ್ ಮೋಹನೀಯದಕಾಂಡಕ ಘಾತಂ ತೀರ್ದು ಚರಮ ಕಾಂಡಕದ ಚರಮಪಾಳಿ ಬಿರ್ದನಂತರ ಸಮಯಂ ಮೊದಲ್ಗೊಂಡು ಜಾನಿಸಿ[೨೦]ಯಲ್ಲಿಂ

---

೧. (ಘ,ಚ,ಛ)ಗಳಲ್ಲಿಲ್ಲ. ೨. ಪುಲ್ಲಬೆರ (ಖ), ಪೊಲ್ಲಬೆಂ (ಚ). ೩. (ಕ,ಖ,ಗ) ಗಳಲ್ಲಿಲ್ಲ. ೪. ಯಕೊಡ×× (ಕ)ದಲ್ಲಿ ತ್ರುಟಿತ, ಯ ಕೊಡನುಂ ಬೆರಟ (ಖ), ಯ ಕೊಡನುಂ ಬೆಟಿ (ಗ), ಯುಂ ಬೆಂಟೆ (ಘ), ಯುಮಂಬೆಂಟೆ (ಚ,ಛ). ೫. ಚ್ಚಿಂ (ಘ,ಚ,ಛ). ೬. ವ (ಕ,ಖ,ಗ). ೭. (ಘ,ಚ,ಛ) ಗಳಲ್ಲಿಲ್ಲ. ೮. ರ್ ತಮ್ಮ ಮನದೊಳಿಂ (ಘ,ಚ,ಛ). ೯. ಮಾ (ಘ,ಚ,ಛ). * (ಕ,ಗ,ಚ)ಗಳಲ್ಲಿ ತ್ರುಟಿತ. ೧೦. ಲೆ ಕಿ (ಘ,ಛ). ೧೧. + ಸಮ್ಯಗ್ (ಘ,ಚ,ಛ). ೧೨. ಲ್ಕೆನೆ (ಘ,ಚ,ಛ). + ಈ ಪದ್ಯ (ಘ,ಚ,ಛ) ಗಳಲ್ಲಿಲ್ಲ. ಇದು ತೀರ ಅಶುದ್ಧವಾಗಿರುವುದರಿಂದ ಸರಿಯಾದ ಪಾಠ ಕೊಡಲು ಸಾಧ್ಯವಾಗಿಲ್ಲ. ೧೩. ಬೆರಟೆ (ಖ). ೧೪. ತೋದು (ಕ,ಖ,ಗ). ೧೫. ತ್ರಮು (ಕ,ಖ,ಗ). ೧೬. + ಬೆಂಟೆ (ಚ,ಛ). ೧೭. ಳ್ದದ (ಕ,ಖ,ಗ). ೧೮. ಲ್ಕಂತೆಱದ (ಘ,ಚ,ಛ). ೧೯. + ಕ್ರಮದಿಂ (ಘ,ಚ,ಛ). ೨೦. (ಘ,ಚ,ಛ)ಗಳಲ್ಲಿಲ್ಲ.

ಬಳಿಯಮೇಕತ್ವ ವಿತರ್ಕ [೧]ವೀಚಾರ[೧]ಮೆಂಬೆರಡನೆಯ ಶುಕ್ಲಧ್ಯಾನಮಂ ಕ್ಷೀಣ ಕಷಾಯ[೨]ನಾಗಿ ಜಾನಿಸಿ ಬಳಿಯಂ[೨] ಚರಮಸಮಯದೊಳ್ ನಾ[೩]ಲ್ಕು[೩] ಕರ್ಮಮಂ ಕಿಡಿಸುವ ಸಮಯದೊಳ್ ರಸ ರುಧಿರ ಮಾಂಸ ಮೇದೋಸ್ಥಿ ಮಜ್ಜ ಶುಕ್ಲಮೆಂಬ ಸಪ್ತ ಧಾತುಗಳುಮವಱೊಡನೆ [೪]ಕೆಟ್ಟುವು[೪] ಮತ್ತೆ ಘಾತಿ ಕರ್ಮಂಗಳ ವಾವುವೆಂದೊಡೆ ಅಯ್ದು ತೆಱದ ಜ್ಞಾನಾವರಣೀಯಮೊಂಬತ್ತು ತೆಱದ ದರ್ಶನಾ ವರಣೀಯಮಂತೆರಡುಂ ಕರ್ಮಂಗಳ ಕೇಡಿನೊಳ್ ಲೋಕಾಲೋಕದೊಳಗಣ ಸೂಕ್ಷ್ಮಾಂತರಿತ ದೂರ ಪದಾರ್ಥ ವಸ್ತುಗಳೆಲ್ಲಮಂ ಕ್ರಮ ಕರಣ ವ್ಯವಧಾನ [೫]ರಹಿತ[೫]ಮಾಗಿ ಬಗೆಯದೆ ತಡೆಯದೆ ಸುಱಿಯದೆ ಮೋಹಿಸದೆ ಎಲ್ಲಾ ವಸ್ತುಗಳ ನೊರ್ಮೊದಲಱಿವ ಕಾಣ್ಬನಂತಜ್ಞಾನಮುಮನಂತದರ್ಶನಮುಮನೊಡೆಯರಾದರ್ ಮತ್ತಿರ್ಪತ್ತೆಂಟು ತೆಱದ ಮೋಹನೀಯಮೆಂಬ ಕರ್ಮದ ಕೇಡಿನಿಂ ಅನಂತಸುಖಿ ಗಳಾದರ್ ಮತ್ತಮಯ್ದು ತೆಱದಂತರಾಯಮೆಂಬ ಕರ್ಮದ ಕೇಡಿನಿಂದಮನಂತ ವೀರ್ಯಮನೊಡೆಯರಾದರ್ ಅಂತೊರ್ಮೊದಲೆ[೬] ಘಾತಿಕರ್ಮಂಗಳ [೭]ನಾಲ್ಕಱ[೭] ಕೇಡಿನಿಂದಮನಂತಚತುಷ್ಟಯಮನೊಡೆಯರ್ ಮುಂಡಕೇವಳಿಗಳಾಗಿರ್ದರ್

ಅನ್ನೆಗಮಿಂದ್ರನ ಬೆಸದಿಂ ಧನದಂ ಮಾಡಿದ ನೆಲದ ಮೇಗೈಸಾಸಿರ [೮]ಬಿಲ್ಲು[೮] ತ್ಸೇಧದೊಳಂತರಿಕ್ಷದೊಳೊಂದು ಯೋಜನ ವಿಸ್ತೀರ್ಣಮೇಕ ಶಿಲೆಯಪ್ಪಿಂದ್ರನೀಲ ಮಣಿಕುಟ್ಟಿಮ ಭೂಮಿಯಕ್ಕುಮದಱ ಮೇಗೆ ಏಕ ಯೋಜನ ವಿಸ್ತೀರ್ಣ ರತ್ನಮಯ ಮಪ್ಪ ಶ್ರೀ ಮಂಟಪಮಕ್ಕುಂ ಮತ್ತಂ ನಾಲ್ಕುಂ ದೆಸೆಯೊಳಂ ಕನಕಮಯಮಪ್ಪ ನಾಲ್ಕುಂ ಸೋಪಾನ ಪಂಕ್ತಿಗಳನೊಡೆಯ ಭೂಮಿಯ ಮೇಗೆ ಸಿಂಹಾಸನಮಕ್ಕುಂ ಅದಱ ಮೇಗಲರ್ದ್ದ ಪೊಂದಾಮರೆಯಕ್ಕುಮದಂ ನಾಲ್ವೆರಲಂ ಮುಟ್ಟದೆ ಅದಱ ಮೇಗೆ ಪ[೯]ರ್ಯಂ[೯]ಕದೊಳಿರ್ದೊಂದು ಬೆಳ್ಗೊಡೆಯನೊಡೆ[೧೦]ಯೊನಾ[೧೦]ಗಿ ಮೂವ ತ್ತೆರ[೧೧]ಡುಂ ಚಾ[೧೧]ಮರಂಗಳಿಂ ದೇವರ್ಕಳ್ ಬೀಸು[೧೨]ತ್ತಮಿಂತಿರ್ಪ[೧೨]ನ್ನೆಗಂ

**ಗಾಹೆ ||** * [೧೩]ಸ[ವ್ವೇ]ಹಿ[೧೩] ಭವಣವಾಸೀ ವೆಂತರ ದೇವಾಯ [೧೪]ಪಳಹಪಳುತ[೧೪]ಸಿಯಾ
ಪುಂಟಿಹ ಕಪ್ಪವಾಸೀ ಸಿಹಣೆಣಾ ಎ ಇ ಜೋ ಇಸಿಯಾ || *

ಎಂದೀ ಪೇಟ್ದ ಚಿಹ್ನಂಗಳಿಂದಱಿದು ಚತುರ್ವಿಧ ದೇವನಿಕಾಯಂ ತಂತಮ್ಮ ಪರಿವಾರಂ ಬೆರಸು ಬಂದು ದಿವ್ಯಮಪ್ಪ ಗಂಧ ಪುಷ್ಪಧೂಪ ದೀಪಾಕ್ಷತಂಗಳಿಂದರ್ಚಿಸಿ ವಂದಿಸಿ ಸಮವಸರಣ [೧೫]ಕೋಷ್ಠಂಗಳೊಳ್[೧೫] ತಂತಮ್ಮಿರ್ಪ ಸ್ಥಾನಂಗಳೊಳ್ ದೇವರ್ಕಳುಂ ದೇವಿಯರ್ಕಳುಂ ಚಾತುರ್ವರ್ಣ್ಯ[೧೬] ಸಂಘಮುಂ ಮೃಗಂಗಳುಂ ಬಳಸಿ[೧೭]ಯುಂ ಬಂದು ಧರ್ಮಮಂ[೧೭]ಕೇಳುತ್ತಿ[೧೮]ರ್ದರ[೧೮]ನ್ನೆಗಂ ಹಳಮುಖನುಂ ಧರ್ಮಮಂ ಕೇಳ್ದು ನಿಂದಿರ್ದ್ದಿಂತೆಂದು ಬಿನ್ನಪಂಗೆಯ್ದಂ ಭಟಾರಾ ನಿಮಗಾಂ

---

೧. (ಕ,ಖ,ಗ)ಗಳಲ್ಲಿಲ್ಲ. ೨. ದಿಂ ಧ್ಯಾನಿಸುತ್ತಂ (ಘ), ದಿಂ ಜಾನಿಸುವ (ಚ), ದಿಂ ಧ್ಯಾನಿಸುವ (ಛ). ೩. ಲ್ಕುಂ ಘಾತಿ (ಘ,ಚ,ಛ). ೪. ಸುಟ್ಟು (ಕ,ಖ,ಗ). ೫. (ಚ)ದಲ್ಲಿಲ್ಲ. ೬. + ನಾಲ್ಕುಂ (ಘ,ಚ,ಛ.) ೭. (ಘ,ಚ,ಛ) ಗಳಲ್ಲಿಲ್ಲ. ೮. ಚಾಪೋ (ಘ,ಚ,ಛ). ೯. ಳಿತಂ (ಕ,ಗ), ಳಿಂತಂ (ಖ). ೧೦. ಯರಾ (ಕ,ಖ,ಗ). ೧೧. ಳ್ಚಾ (ಘ,ಚ,ಛ). ೧೨. ತ್ತಿರ್ಪರ (ಘ,ಚ,ಛ). ೧೩. ಂಖೇ (ಸ). ೧೪. ಪಳಹರವರ (ಘ,ಚ), ಪಹಳಹರವ (ಛ). * ಈ ಪದ್ಯದ ಪಾಠ ತೀರ ಅಶುದ್ಧವಾಗಿದೆ ೧೫. ಮುಂಕೋಷ್ಠಮುಮಿಲ್ಲದೆ (ಕ,ಖ,ಗ). ೧೬. + ಶ್ರವಣ (ಘ,ಚ,ಛ). ೧೭. ಯುಮಿರ್ದು (ಘ,ಚ,ಛ). ೧೮. ರ್ಪ (ಘ,ಚ,ಛ).

ಪೊಲ್ಲ[೧]ಕೆ[೧]ಯ್ದೆನದನೆನಗೆ ಕ್ಷಮಿಯಿಸಿಮೆಂದೆಱಗಿ ಪೊಡೆವಟ್ಟೊಡೆ ಭಟಾರರೆಂದರ್ ನಿನಗೇನುಂ ದೋಷಮಿಲ್ಲೆಂದಾತನ [೨]ತಮ್ಮ[೨] ಭವಂಗಳಂ [೩]ಪೇೞ್ದೊಡೆ ಕೇಳ್ದೀ[೩]ಗೆಯ್ದ ಪಾಪಮಿಂತಲ್ಲದೆ ಪಿಂಗದೆನಗೆ ದೀಕ್ಷೆಯಂ ದಯೆಗೆಯ್ಯಿಮೆಂದು ಬೇಡಿ ತಪಂಬಟ್ಟು ಶಿಷ್ಯನಾಗಿ ಆಗಮಂಗಳನೋದುತ್ತಿರ್ದನಿತ್ತ ಗುರುದತ್ತ ಕೇವಳಿಯುಂ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಭವ್ಯವರಪುಂಡರೀಕರ್ಕಳ್ಗೆ ಧರ್ಮಾಮೃತಮಂ ಕಱೆಯುತ್ತಂ ಪಲಂಬರುಮಂ ಧರ್ಮಂಗೊಳಿಸುತ್ತಂ [೪]ಮತ್ತಮಾ[೪] ಪಲ್ಲಿಖೇಡಮೆಂಬೂರ್ಗೆ ಬಂದು ಯೋಗನಿರೋಧಂ ಗೆಯ್ದು [೫]ಅ[೫]ಯೋಗಿ ಭಟಾರರಾಗಿ ಪಂಚ ಹ್ರಸ್ವಾಕ್ಷರೋಚ್ಚಾರಣ ಮಾತ್ರ[೬]ಕಾಲದಿಂದಾ[೬]ಯುರ್ನಾಮ ಗೋತ್ರ ವೇದನೀಯಮೆಂಬ ನಾಲ್ಕುಮಘಾತಿ ಕರ್ಮಂಗಳನೊರ್ಮೊದಲೆ ಕಿಡಿಸಿ ಏಕಸಮಯದೊಳಗೆ ಮೋಕ್ಷಸ್ಥಾನದೊಳ್ [೭]ನೆಲ[೭]ಸಿ ಜಾತಿಜರಾಮರಣಂಗಳುಂ ಪಸಿವುಂ ನೀರೞ್ಕೆ ಶೀತೋಷ್ಣವಾತಂ ಮೊದಲಾಗೊಡೆಯ ಆವ ಬಾಧೆಗಳಿಲ್ಲದ ಅನಂತಜ್ಞಾನಮನಂತದರ್ಶನಮನಂತಸುಖಮನಂತವೀರ್ಯದೊಳ್ ಕೂಡಿ ಎಲ್ಲಾ ಕಾಲಮುಂ ಸುಖಿಯಾಗಿರ್ದರ್

**ಗಾಹೆ** ॥ ಅರುಜಮಮರಣಂ ಮಧುರಂ ಅಕ್ಖಯ ಸೊಕ್ಖಂ ಅಣೋವಮಂ ಪತ್ತಾ ।
ಅವ್ವಾಬಾಧಮಣಂತಂ ಅಣಗಾರಾ ಕಾಲಮಚ್ಛಂತಿ ॥

ಮತ್ತೆ ಹಳಮುಖರಿಸಿಯರುಮಾಗಮಂಗಳೆಲ್ಲಮಂ ಕಲ್ತು ಏಕವಿಹಾರಿಯಾಗಿ ಗ್ರಾಮ ನಗರ ಖೇಡ ಖರ್ವಡ ಮಡಂಬ ಪಟ್ಟಣ ದ್ರೋಣಾಮುಖಂಗಳಂ ವಿಹಾರಿಸುತ್ತಂ ಕೊಂಕಣ ವಿಷಯಮನೆಯ್ದಿಯಾ ನಾಡೊಳ್ ಪೋಗು[೮]ತ್ತಂ ಊರನೆಯ್ದದೆಡೆಯೊಳ್ ಪೊಲದೊಳ್ ನೇಸಪ್ಪಟ್ಟೊಡೆ[೮] ಯತ್ರಾಸ್ತಮಿತವಾಸಿಯೆಲ್ಲಿ ನೇಸಪ್ಪಟ್ಟೊಡಲ್ಲಿಯೆ ನಿಲ್ವರಪ್ಪುದಱಿಂ ಕುಮ್ಮರಿಯಂ ಸುಡಲೆಂದು ಕಡಿದೊಟ್ಟದ ಮರಂಗಳ ಮೇಗಿರುಳ್ ದೇವರಂ ಬಂದಿಸಿ ನಿಯಮಂಗೆಯ್ದು ಜೋಗ ಭಕ್ತಿಯಿಂದಿರ್ದರನ್ನೆಗಂ ಕುಮ್ಮರಿಯಂ ಸುಡಲೆಂದು ತುಂಗಭದ್ರನೆಂಬ[೯]ಪೋಡುಂ[೯] ಗಾಱಂ ಸೊರ್ಕಿ ತೂಂಕ[೧೦]ಡಿಂದಿರುಳ್[೧೦] ಕಟ್ಟಿಂಗ[೧೧]ಳ್[೧೧]ಕಡುಗತ್ತಲೆಯೊಳ್ ಬಂದು ಕಿಚ್ಚಂ ತಗುಳ್ಚಿ ಪೋದೊ[೧೨]ನಾ[೧೨] ಕಿಚ್ಚಿನಿಂದಂ ಹಳಮುಖರಿಸಿಯುಂ ಬೇಯುತ್ತಂ ಧರ್ಮಧ್ಯಾನಂಗಳಂ ಧ್ಯಾನಿಸಿ [೧೩]ಶುಭಪರಿಣಾಮದಿಂ[೧೩] ಮುಡಿಪಿ ಪದಿನಾಱನೆಯಚ್ಯುತಕಲ್ಪದೊಳ್ ಇರ್ಪತ್ತೆರಡು ಸಾಗರೋಪಮಾಯುಷ್ಯಮನೊಡೆಯೊನಚ್ಯುತೇಂದ್ರನಾಗಿ ಪುಟ್ಟಿದೊಂ

ಮತ್ತಿತ್ತ ತುಂಗಭದ್ರನೆಂಬೊಂ ಪೋ[೧೪]ಡುಂ[೧೪]ಗಾಱಂ ನೇಸಮ್ಮೂ[೧೫]ಡೆ[೧೫] ಕುಮ್ಮರಿಯಂ ನೋಡಲೆಂದು ಪೋದನನ್ನೆಗಂ ಸತ್ತಿರ್ದ ರಿಸಿಯಂ ಕಂಡು ಪಂಚ ಮಹಾಪಾತಕನೆಂ ನಿಷ್ಕಾರಣಮಱಿಯ[೧೬]ದೆ[೧೬] ರಿಸಿಯರಂ ಕೊಂದೆನೆಂದು

---

೧. ದುಗೆ (ಘ,ಚ,ಛ). ೨. (ಘ,ಚ,ಛ)ಗಳಲ್ಲಿಲ್ಲ. ೩. ಪೇೞ್ದೀ (ಕ,ಖ,ಗ), ಕೇಳೆ ಪೇೞ್ದೊಡೀ ಕೇಳ್ದು ಮತ್ತಮಿಾ (ಚ). ೪. ಪಲಕಾಲಂ ವಿಹಾರಿಸುತ್ತುಮಾ ಮುನ್ನಿನ (ಘ,ಚ,ಛ). ೫. ಬಳಿಕೆ (ಘ,ಚ,ಛ). ೬. ದಿನಾ (ಘ,ಚ,ಛ). ೭. ನಿಲಿ (ಕ,ಖ,ಗ). ೮. ತ್ತಮೂರನೆಯ್ದುವಲ್ಲಿಯೆಡೆಯೊಳ್ ನೇಸಪ್ಪಡುಉದುಂ (ಘ,ಚ,ಛ). ೯. ಪೊಳಲುಂ (ಕ,ಗ), ಪೊಳುಂ (ಖ). ೧೦. ಡಿಸಿ ಇರುಳ (ಕ,ಖ,ಗ). ೧೧. ಳೊಳ್ (ಕ,ಖ,ಗ). ೧೨. ಡಾ (ಘ,ಚ,ಛ). ೧೩. ಸಮ್ಯಗ್‌ದರ್ಶನ ಜ್ಞಾನ ಚಾರಿತ್ರಂಗಳಂ ಸಾಧಿಸಿ ಸಮಾಧಿಮರಣದಿಂ (ಘ,ಚ,ಛ). ೧೪. ಳುಂ (ಕ,ಖ,ಗ). ೧೫. ಡುವುದುಂ (ಘ,ಚ,ಛ). ೧೬. ದೇಕಾರಣದೆ (ಖ), ದೆ ಕಾಣದೆ (ಘ,ಚ,ಛ).

